

ಕರ್ನಾಟಕ ಸರ್ಕಾರ

ಸಂಖ್ಯೆ: ಆಕುಕ 75 ಎಸ್‌ಬಿವಿ 2021.

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 24.03.2021.

131 U/S
25/3/21

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸ ಸೌಧ,

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
**ಬೆಂಗಳೂರು.**

ಮಾನ್ಯರೆ,

**ವಿಷಯ:-** ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ (ಉಡುಪಿ) ಇವರ ಚುಕ್ಕೆ ರಹಿತ ಪ್ರ.ಸಂ:3831ಕ್ಕೆ ಉತ್ತರ ನೀಡುವ ಬಗ್ಗೆ.

*****

ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ (ಉಡುಪಿ) ಇವರ ಚುಕ್ಕೆ ರಹಿತ ಪ್ರ.ಸಂ:3831ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

24/3/21
(ಪದ್ಮ ವಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಆರೋಗ್ಯ 1&2)
24/03

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3831
ಮಾನ್ಯ ಸದಸ್ಯರ ಹೆಸರು : ಶ್ರೀ ರಘುಪತಿ ಭಟ್ ಕೆ (ಉಡುಪಿ)
ಉತ್ತರಿಸಬೇಕಾದ ದಿನಾಂಕ : 25.03.2021
ಉತ್ತರಿಸುವ ಸಚಿವರು : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಆರ್ಥಿಕವಾಗಿ ಹಿಂದುಳಿದ ಜನಸಾಮಾನ್ಯರು ತೀವ್ರ ತರಹದ ಖಾಯಿಲೆಗಳಿಗೆ ಚಿಕಿತ್ಸೆ ಪಡೆಯುವಲ್ಲಿ ನೆರವಾಗಲು ಕೇಂದ್ರ ಸರ್ಕಾರ, ಆರೋಗ್ಯ ಕಲ್ಯಾಣ ಕಾರ್ಯಕ್ರಮದಡಿ ಜಾರಿಗೆ ತಂದಿರುವ ಆಯುಷ್ಮಾನ್ ಭಾರತ್ ಯೋಜನೆಯಡಿಯಲ್ಲಿ ಚಿಕಿತ್ಸೆ ಪಡೆಯಬೇಕಾದ ರೋಗಿಯು, ಕಡ್ಡಾಯವಾಗಿ ಜಿಲ್ಲಾ ಸರ್ಕಾರಿ ಆಸ್ಪತ್ರೆಯಿಂದ ಉಲ್ಲೇಖಿತ ಪತ್ರ (Referral letter) ತರಬೇಕು ಎಂಬ ನೀತಿಯನ್ನು ಅಳವಡಿಸಿರುವುದರಿಂದ ಜನಸಾಮಾನ್ಯರು ಚಿಕಿತ್ಸೆ ಪಡೆಯುವಲ್ಲಿ ತೀವ್ರ ಸಂಕಷ್ಟಕ್ಕೆ ಒಳಗಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಈ ನೀತಿಯಿಂದಾಗಿ ತೀವ್ರತರಹದ ಖಾಯಿಲೆಗಳಿಗೆ ಹಾಗೂ ತುರ್ತು ಚಿಕಿತ್ಸೆಗೆ ಸಂಬಂಧಿಸಿದಂತೆ ಖಾಸಗಿ ಆಸ್ಪತ್ರೆಗೆ ದಾಖಲಾಗುವ ರೋಗಿಗಳಿಗೆ ಆಯುಷ್ಮಾನ್ ಭಾರತ್ ಯೋಜನೆಯಡಿ ಚಿಕಿತ್ಸೆ ನೀಡಲು ಆಸ್ಪತ್ರೆಗಳು ನಿರಾಕರಿಸುತ್ತಿರುವುದನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿದೆಯೇ; | ಹೌದು. |
| ಇ | ಕೇಂದ್ರ ಸರ್ಕಾರ ಜಾರಿಗೆ ತಂದಿರುವ ಆಯುಷ್ಮಾನ್ ಭಾರತ್ ಯೋಜನೆಯ ಮಾರ್ಗಸೂಚಿಯ ಅಂಶಗಳಾವುವು; ಈ ಯೋಜನೆಯಡಿ ಚಿಕಿತ್ಸೆ ನೀಡಲು ಅಳವಡಿಸಲಾದ ಖಾಯಿಲೆಯ ವಿಧಗಳು ಯಾವುವು; | ಕೇಂದ್ರ ಸರ್ಕಾರ ಜಾರಿಗೆ ತಂದಿರುವ ಆಯುಷ್ಮಾನ್ ಭಾರತ್ ಯೋಜನೆಯ ಮಾರ್ಗಸೂಚಿ ಅಂಶಗಳು ಈ ಕೆಳಕಂಡಂತಿವೆ:<br>1) Socio Economic and Caste Census 2011 (SECC 2011) ದತ್ತಾಂಶ ಹಾಗೂ ಈ ಹಿಂದೆ ಇದ್ದ ಆರ್.ಎಸ್.ಬಿ.ವೈ ಅಡಿಯಲ್ಲಿ ನೋಂದಾಯಿತ ಕುಟುಂಬಗಳಿಗೆ ಎಬಿ-ಪಿ.ಎಂ.ಜೆ.ಎ.ವೈ ಸೌಲಭ್ಯ ಒದಗಿಸುವುದು. |

| | | |
|---|---|---|
| | | 2) ಎಸ್.ಇ.ಸಿ.ಸಿ 2011 ದತ್ತಾಂಶದಲ್ಲಿರುವ ಅಸಂಘಟಿತ ಕಾರ್ಮಿಕರು ಒಳಗೊಂಡಿರುತ್ತಾರೆ.<br>3) ಎಲ್ಲಾ ರೀತಿ ನೋಂದಾವಣೆ ಪೂರ್ವ ಕಾಯಿಲೆಗಳು ಸಹ ಚಿಕಿತ್ಸೆಗಾಗಿ ಪರಿಗಣಿಸಲಾಗುತ್ತದೆ.<br><br>ಈ ಯೋಜನೆಯಡಿ 23 ವಿವಿಧ ತಜ್ಞತೆಗಳ ಕಾಯಿಲೆಗಳಿಗೆ 1393 ಚಿಕಿತ್ಸಾ ವಿಧಾನಗಳು ಒಳಗೊಂಡಿರುತ್ತದೆ. **ಅನುಬಂಧ 1&2** ರಲ್ಲಿ ಲಗತ್ತಿಸಿದೆ. |
| ಈ | ಇದಕ್ಕೆ ಕೇಂದ್ರ ಸರ್ಕಾರ ನೀಡಿರುವ ಮಾನದಂಡಗಳೇನು? (ಪ್ರತಿಗಳ ಸಹಿತ ಸಂಪೂರ್ಣ ವಿವರಗಳನ್ನು ಒದಗಿಸುವುದು) | ಯೋಜನೆಯ ಸೌಲಭ್ಯ ಪಡೆಯಲು ಎಸ್.ಇ.ಸಿ.ಸಿ 2011 ದತ್ತಾಂಶದಲ್ಲಿರುವವರು, ಆರ್‌ಎಸ್‌ಬಿವೈ ಕಾರ್ಡ್ ಹೊಂದಿರುವವರು ಹಾಗೂ ಬಿಪಿಎಲ್ ಕಾರ್ಡ್ ಮತ್ತು ಆಧಾರ್ ಕಾರ್ಡ್‌ಗಳು ಮಾನದಂಡಗಳಾಗಿರುತ್ತದೆ. **ಅನುಬಂಧ-3** ರಲ್ಲಿ ಲಗತ್ತಿಸಿದೆ. |

ಆಕುಕ 75 ಎಸ್‌ಬಿವಿ 2021.

(ಡಾ|| ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

## ಕರ್ನಾಟಕ ಸರ್ಕಾರ

ಸಂಖ್ಯೆ: ಕಾಇ 20 ಸಿಎಲ್‌ಸಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು,ದಿನಾಂಕ: 24/03/2021

ಇಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಕಾರ್ಮಿಕ ಇಲಾಖೆ
ವಿಕಾಸಸೌಧ, ಬೆಂಗಳೂರು-01.

ಇವರಿಗೆ:

ಕಾರ್ಯದರ್ಶಿಗಳು,
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು-01

ಮಾನ್ಯರೆ,

ವಿಷಯ: ವಿಧಾನಸಭೆ ಸದಸ್ಯರಾದ ಶ್ರೀಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) ಅವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3843 ಕ್ಕೆ ಉತ್ತರ ಒದಗಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನಸಭೆ ಸದಸ್ಯರಾದ ಶ್ರೀಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ) ಅವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3843 ಕ್ಕೆ ಉತ್ತರದ ಪಿ.ಡಿ.ಎಫ್ ಪ್ರತಿಯನ್ನು ಇ-ಮೇಲ್ ಮೂಲಕ **dsqb-kla-kar@nic.in** ಗೆ ಈಗಾಗಲೇ ಕಳುಹಿಸಲಾಗಿದೆ. ಹಾಗೂ 25 ಹಾರ್ಡ್ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

Girisamma

(ಗಿರಿಜಮ್ಮ)
ಪೀಠಾಧಿಕಾರಿ-06
ಕಾರ್ಮಿಕ ಇಲಾಖೆ

# ಕರ್ನಾಟಕ ವಿಧಾನಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3843
2. ವಿಧಾನಸಭೆ ಸದಸ್ಯರ ಹೆಸರು : ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗ)
3. ಉತ್ತರಿಸುವ ದಿನಾಂಕ : 25/03/2021
4. ಉತ್ತರಿಸುವ ಸಚಿವರು : ಮಾನ್ಯ ಕಾರ್ಮಿಕ ಸಚಿವರು

<table>
<tr><th>ಕ್ರ.ಸಂ</th><th>ಪ್ರಶ್ನೆಗಳು</th><th>ಉತ್ತರ</th></tr>
<tr><td>ಅ)</td><td>ರಾಜ್ಯದಲ್ಲಿ ಬಾಲಕಾರ್ಮಿಕರ ನಿರ್ಮೂಲನೆಗಾಗಿ ಕಾರ್ಯನಿರ್ವಹಿಸುತ್ತಿರುವ ಯೋಜನಾ ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು)</td><td>ಕರ್ನಾಟಕ ರಾಜ್ಯ ಬಾಲಕಾರ್ಮಿಕ ನಿರ್ಮೂಲನ ಯೋಜನಾ ಸೊಸೈಟಿಯ ಕಛೇರಿಯಲ್ಲಿ ಹೊರಗುತ್ತಿಗೆ / ಗೌರವಧನ ಆಧಾರದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ 10 ಸಿಬ್ಬಂದಿಗಳು ಸೇರಿದಂತೆ, ರಾಜ್ಯದ 30 ಜಿಲ್ಲೆಗಳ ಜಿಲ್ಲಾ ಬಾಲಕಾರ್ಮಿಕ ಯೋಜನಾ ಸಂಸ್ಥೆಗಳಲ್ಲಿ ಗೌರವಧನದ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ 73 ಸಿಬ್ಬಂದಿಗಳು ಸೇರಿ ಒಟ್ಟು 83 ಸಿಬ್ಬಂದಿಗಳು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಜಿಲ್ಲಾವಾರು ಮಾಹಿತಿಯನ್ನು ಅನುಬಂಧ ದಲ್ಲಿ ಒದಗಿಸಿದೆ.</td></tr>
<tr><td>ಆ)</td><td>ಸದರಿ ನೌಕರರಿಗೆ ಸರ್ಕಾರ ನೀಡುತ್ತಿರುವ ವೇತನದ ವಿವರಗಳನ್ನು ನೀಡುವುದು;</td><td>ರಾಜ್ಯ ಬಾಲಕಾರ್ಮಿಕ ಯೋಜನೆ (ಎಸ್.ಸಿ.ಎಲ್.ಪಿ) ಯು ಜಾರಿಯಲ್ಲಿರುವ 25 ಜಿಲ್ಲೆಗಳ ಜಿಲ್ಲಾ ಬಾಲಕಾರ್ಮಿಕ ಯೋಜನಾ ಸೊಸೈಟಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ರಾಜ್ಯ ಸರ್ಕಾರದ ವತಿಯಿಂದ ನೀಡುತ್ತಿರುವ ಗೌರವಧನದ ವಿವರಗಳು ಈ ಕೆಳಕಂಡಂತೆ ಇರುತ್ತದೆ;<br><table><tr><th>ಕ್ರ ಸಂ</th><th>ಹುದ್ದೆ</th><th>ಸಿಬ್ಬಂದಿಗಳಿಗೆ ನೀಡುತ್ತಿರುವ ಮಾಸಿಕ ಗೌರವಧನ (ರೂ. ಗಳು)</th></tr><tr><td>1</td><td>ಯೋಜನಾ ನಿರ್ದೇಶಕರು</td><td>19,965.00</td></tr><tr><td>2</td><td>ಗುಮಾಸ್ತರು ಕಂ ಲೆಕ್ಕಿಗರು</td><td>13,310.00</td></tr><tr><td>3</td><td>ಕಛೇರಿ ಜವಾನ</td><td>10,648.00</td></tr></table><br>ರಾಷ್ಟ್ರೀಯ ಬಾಲಕಾರ್ಮಿಕ ಯೋಜನೆ(ಎನ್.ಸಿ.ಎಲ್.ಪಿ) ಯು ಜಾರಿಯಲ್ಲಿರುವ 5 ಜಿಲ್ಲೆಗಳ ಜಿಲ್ಲಾ ಬಾಲಕಾರ್ಮಿಕ ಯೋಜನಾ ಸೊಸೈಟಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಕೇಂದ್ರ ಸರ್ಕಾರದ ವತಿಯಿಂದ ನೀಡುತ್ತಿರುವ ಗೌರವಧನದ ವಿವರಗಳು ಈ ಕೆಳಕಂಡಂತೆ ಇರುತ್ತದೆ;</td></tr>
</table>

| ಕ್ರ ಸಂ | ಹುದ್ದೆ | ಸಿಬ್ಬಂದಿಗಳಿಗೆ ನೀಡುತ್ತಿರುವ ಮಾಸಿಕ ಗೌರವಧನ (ರೂ.ಗಳಲ್ಲಿ) |
|---|---|---|
| 1 | ಯೋಜನಾ ನಿರ್ದೇಶಕರು | 30,000 |
| 2 | ಕಾರ್ಯಕ್ರಮ ವ್ಯವಸ್ಥಾಪಕರು | 22,000 |
| 2 | ಲೆಕ್ಕಿಗರು | 15,000 |
| 3 | ಡಾಟಾ ಎಂಟ್ರಿ ಆಪರೇಟರ್ | 10,000 |
| 4 | ಡ್ರೈವರ್ | 9,000 |
| 5 | ಜವಾನರು | 8,000 |

ಕರ್ನಾಟಕ ರಾಜ್ಯ ಬಾಲಕಾರ್ಮಿಕ ನಿರ್ಮೂಲನಾ ಯೋಜನಾ ಸೊಸೈಟಿಯ ಕೇಂದ್ರ ಕಛೇರಿ (ಬೆಂಗಳೂರು)ಯಲ್ಲಿ ಹೊರಗುತ್ತಿಗೆ ಹಾಗೂ ಗೌರವಧನದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ರಾಜ್ಯ ಸರ್ಕಾರವು ನೀಡುವ ವೇತನ / ಗೌರವಧನದ ವಿವರಗಳು;

| ಕ್ರ ಸಂ | ಹುದ್ದೆ | ಗೌರವಧನ (ರೂ.ಗಳಲ್ಲಿ) |
|---|---|---|
| 1. | ಇ-ಜರ್ನಲ್ ಎಡಿಟರ್ | 30,000 |
| 2. | ಎಂಐಎಸ್ ಮ್ಯಾನೇಜರ್ | 30,000 |
| 3. | ಕಛೇರಿ ಸಹಾಯಕರು | 24,000 |
| 4. | ಸಹಾಯವಾಣಿ ಸಂಯೋಜಕರು | 20,000 |
| 5. | ಡಾಟಾ ಎಂಟ್ರಿ ಆಪರೇಟರ್ ಹುದ್ದೆ | 18,000 |
| 6. | ಡ್ರೈವರ್ | 17,000 |
| 7. | ಕಛೇರಿ ಜವಾನ | 15,000 |

| | | |
|---|---|---|
| ಇ) | ಯೋಜನೆಯ ಅನುಷ್ಠಾನಕ್ಕೆ ಸರ್ಕಾರ ಮೀಸಲಿರಿಸಿದ ಅನುದಾನವೆಷ್ಟು; | 2021-22ನೇ ಸಾಲಿನಲ್ಲಿ ಬಾಲಕಾರ್ಮಿಕ ಪದ್ಧತಿ ನಿರ್ಮೂಲನಾ ಯೋಜನೆಗಾಗಿ ರಾಜ್ಯ ಸರ್ಕಾರವು ರೂ. 400.00 ಲಕ್ಷಗಳ ಅನುದಾನವನ್ನು ಮೀಸಲಿರಿಸಿದೆ. |
| ಈ) | ಅನುದಾನವನ್ನು ಸಕಾಲಕ್ಕೆ ಬಿಡುಗಡೆ ಮಾಡಲಾಗುತ್ತಿದೆಯೇ; ಇಲ್ಲವಾದಲ್ಲಿ ವಿಳಂಬಕ್ಕೆ ಕಾರಣಗಳೇನು; | ರಾಜ್ಯ ಸರ್ಕಾರವು ಬಾಲಕಾರ್ಮಿಕ ಪದ್ಧತಿ ನಿರ್ಮೂಲನಾ ಯೋಜನೆಗಾಗಿ ನಿಗಧಿಗೊಳಿಸಿದ ಅನುದಾನವನ್ನು ಸಕಾಲಕ್ಕೆ ಬಿಡುಗಡೆ ಮಾಡಿರುತ್ತದೆ. |
| ಉ) | ಸದರಿ ಯೋಜನೆಯಡಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳಿಗೆ ಸೇವಾ ಭದ್ರತೆಯನ್ನು ಒದಗಿಸಲಾಗಿದೆಯೇ; ಇಲ್ಲವಾದಲ್ಲಿ ಈ ಕುರಿತು ಸರ್ಕಾರ ಚಿಂತನೆ ನಡೆಸಿದೆಯೇ? | ಬಾಲಕಾರ್ಮಿಕ ಪುನರ್ವಸತಿ ಯೋಜನೆಯು ರಾಜ್ಯ ಸರ್ಕಾರದ ಒಂದು ಯೋಜನೆಯಾಗಿದ್ದು, ಕರ್ನಾಟಕ ರಾಜ್ಯದಲ್ಲಿ ಬಾಲಕಾರ್ಮಿಕ ಪದ್ಧತಿಯನ್ನು ನಿರ್ಮೂಲನೆ ಮಾಡಲು ಪ್ರಾರಂಭಿಸಿರುತ್ತದೆ. ಸದರಿಯಂತೆ ಕರ್ನಾಟಕ ರಾಜ್ಯ ಬಾಲಕಾರ್ಮಿಕ ನಿರ್ಮೂಲನಾ ಯೋಜನಾ ಸೊಸೈಟಿಯ |

| | | |
|---|---|---|
| | | ಕೇಂದ್ರ ಕಛೇರಿ (ಬೆಂಗಳೂರು)ಯಲ್ಲಿ ಹೊರಗುತ್ತಿಗೆ ಹಾಗೂ ಗೌರವಧನದಲ್ಲಿ ಹಾಗೂ ರಾಜ್ಯ ಬಾಲಕಾರ್ಮಿಕ ಯೋಜನೆ (ಎಸ್.ಸಿ.ಎಲ್.ಪಿ) ಯು ಜಾರಿಯಲ್ಲಿರುವ 25 ಜಿಲ್ಲೆಗಳ ಜಿಲ್ಲಾ ಬಾಲಕಾರ್ಮಿಕ ಯೋಜನಾ ಸೊಸೈಟಿಗಳಲ್ಲಿ ಸಿಬ್ಬಂದಿಗಳನ್ನು ಗೌರವಧನದ ಆಧಾರದಲ್ಲಿ ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಕಾರ್ಯಾಲಯದಿಂದ ನೇಮಕ ಮಾಡಿಕೊಳ್ಳಲಾಗಿರುತ್ತದೆ. ರಾಷ್ಟ್ರೀಯ ಬಾಲಕಾರ್ಮಿಕ ಯೋಜನೆ(ಎನ್.ಸಿ.ಎಲ್.ಪಿ)ಯು ಜಾರಿಯಲ್ಲಿರುವ 5 ಜಿಲ್ಲೆಗಳ ಜಿಲ್ಲಾ ಬಾಲಕಾರ್ಮಿಕ ಯೋಜನಾ ಸೊಸೈಟಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳನ್ನು ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಕಾರ್ಯಾಲಯದಿಂದ ನೇಮಕ ಮಾಡಿಕೊಳ್ಳಲಾಗಿರುತ್ತದೆ.<br><br>ಈ ಯೋಜನೆಯು ಬಾಲಕಾರ್ಮಿಕ ಹಾಗೂ ಕಿಶೋರ ಕಾರ್ಮಿಕ ಪದ್ಧತಿ ನಿರ್ಮೂಲನೆ ಮಾಡುವಂತಹ ನಿರ್ಧಿಷ್ಟ ಗುರಿ ಹೊಂದಿದ ಒಂದು ಯೋಜನೆಯಾಗಿರುವುದರಿಂದ ಸೇವಾ ಭದ್ರತೆ ಒದಗಿಸುವ ಕುರಿತಾದ ಯಾವುದೇ ಪ್ರಸ್ತಾವನೆ ಪ್ರಸ್ತುತ ಸರ್ಕಾರದ ಮುಂದೆ ಇರುವುದಿಲ್ಲ. |

**ಸಂಖ್ಯೆ: ಕಾಇ 20 ಸಿಎಲ್‌ಸಿ 2021**

23/3/2021

**(ಅರಬೈಲ್ ಶಿವರಾಮ್ ಹೆಬ್ಬಾರ್)**
**ಕಾರ್ಮಿಕ ಸಚಿವರು.**

ಅನುಬಂಧ-1

ಗೌರವಾನ್ವಿತ ವಿಧಾನಸಭೆಯ ಸದಸ್ಯರಾದ ಶ್ರೀ ಆಚಾರ್ ಹಾಲಪ್ಪ ಬಸಪ್ಪ(ಯಲಬುರ್ಗ)
ಇವರ ಪ್ರಶ್ನೆ ಸಂಖ್ಯೆ: 3843 ಕ್ಕೆ ಉತ್ತರ

1. ಜಿಲ್ಲಾ ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆಗಾಗಿ ಯೋಜನಾ ಸಂಸ್ಥೆಗಳಲ್ಲಿ ಸಿಬ್ಬಂದಿಗಳ ಸಂಖ್ಯೆಗಳ ವಿವರ:-

| ಕ್ರ. ಸಂ. | ಜಿಲ್ಲೆಗಳ ಹೆಸರು | ಬಾಲಕಾರ್ಮಿಕ ಪದ್ಧತಿ ನಿರ್ಮೂಲನೆಗಾಗಿ ಯೋಜನಾ ಸಂಸ್ಥೆಗಳಲ್ಲಿ ಸಿಬ್ಬಂದಿಗಳ ಸಂಖ್ಯೆ | | | | | | ಒಟ್ಟು |
|---|---|---|---|---|---|---|---|---|
| | | ಯೋಜನಾ ನಿರ್ದೇಶಕರು | ಪ್ರೋಗ್ರಾಮ್ ಮ್ಯಾನೇಜರ್ | ಲೆಕ್ಕಿಗರು | ಡಾಟಾ ಎಂಟ್ರಿ ಆಪರೇಟರ್ | ಡ್ರೈವರ್ | ಕಛೇರಿ ಜವಾನ | |
| 1) | ಬೆಂಗಳೂರು ನಗರ | – | 1 | – | 1 | – | – | 02 |
| 2) | ಬೆಂಗಳೂರು ಗ್ರಾಮೀಣ | 1 | 1 | 1 | – | – | 1 | 04 |
| 3) | ತುಮಕೂರು | 1 | – | 1 | – | – | 1 | 03 |
| 4) | ಚಿಕ್ಕಬಳ್ಳಾಪುರ | 1 | – | 1 | – | – | 1 | 03 |
| 5) | ಕೋಲಾರ | 1 | – | – | – | – | 1 | 02 |
| 6) | ಮೈಸೂರು | 1 | – | – | – | – | 1 | 02 |
| 7) | ಮಂಡ್ಯ | 1 | – | – | 1 | – | – | 02 |
| 8) | ಚಾಮರಾಜನಗರ | 1 | – | 1 | – | – | 1 | 03 |
| 9) | ಮಂಗಳೂರು | 1 | – | 1 | – | – | 1 | 03 |
| 10) | ಉಡುಪಿ | 1 | – | 1 | – | – | 1 | 03 |
| 11) | ಶಿವಮೊಗ್ಗ | 1 | – | – | – | – | 1 | 02 |
| 12) | ಚಿಕ್ಕಮಗಳೂರು | 1 | – | 1 | – | – | 1 | 03 |
| 13) | ಹಾಸನ | 1 | – | 1 | – | – | 1 | 03 |
| 14) | ಮಡಿಕೇರಿ | 1 | – | – | – | – | – | 01 |
| 15) | ಬೆಳಗಾವಿ | 1 | – | – | – | – | – | 01 |
| 16) | ವಿಜಯಪುರ | – | – | – | – | – | – | 00 |
| 17) | ಬಾಗಲಕೋಟೆ | 1 | – | – | – | – | – | 01 |
| 18) | ಧಾರವಾಡ | – | – | 1 | – | – | 1 | 02 |
| 19) | ಗದಗ | 1 | – | – | – | – | – | 01 |
| 20) | ಕಾರವಾರ | 1 | – | – | – | – | 1 | 02 |
| 21) | ಹಾವೇರಿ | – | – | 1 | – | – | – | 01 |
| 22) | ದಾವಣಗೆರೆ | 1 | – | – | – | – | 1 | 02 |
| 23) | ಬಳ್ಳಾರಿ | 1 | 1 | 1 | – | 1 | 1 | 04 |
| 24) | ಚಿತ್ರದುರ್ಗ | 1 | – | 1 | – | – | 1 | 03 |
| 25) | ಕಲಬುರಗಿ | 1 | – | 1 | 1 | – | 1 | 04 |
| 26) | ಬೀದರ್ | 1 | – | 1 | – | – | 1 | 03 |
| 27) | ರಾಯಚೂರು | 1 | 1 | 1 | 1 | 1 | 1 | 06 |

| | | | | | | | | |
|---|---|---|---|---|---|---|---|---|
| 28) | ಕೊಪ್ಪಳ | 1 | – | 1 | – | – | – | **02** |
| 29) | ರಾಮನಗರ | 1 | – | 1 | – | – | 1 | **03** |
| 30) | ಯಾದಗಿರಿ | – | – | 1 | – | – | 1 | **02** |
| **ಒಟ್ಟು** | | **25** | **04** | **18** | **03** | **02** | **21** | **73** |

**ಕರ್ನಾಟಕ ಸರ್ಕಾರ**

ಸಂಖ್ಯೆ: ಇಪಿ 151 ಎಸ್‌ಇಎಸ್ 2021

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:24–03–2021.

**ಇಂದ:**

**ಸರ್ಕಾರದ ಅಧೀನ ಕಾರ್ಯದರ್ಶಿ,**
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆ,
ಬಹುಮಹಡಿ ಕಟ್ಟಡ, ಬೆಂಗಳೂರು.

**ಇವರಿಗೆ :**

**ಕಾರ್ಯದರ್ಶಿ,**
ಕರ್ನಾಟಕ ವಿಧಾನ ಸಭೆ
ಬೆಂಗಳೂರು.

42 U/S 25/3/21

ಮಾನ್ಯರೆ,

**ವಿಷಯ:** ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಭೀಮಾನಾಯ್ಕ.ಎಸ್(ಹಗರಿಬೊಮ್ಮನಹಳ್ಳಿ) ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:2609ಕ್ಕೆ ಉತ್ತರ ಒದಗಿಸುವ ಬಗ್ಗೆ.

**ಉಲ್ಲೇಖ:** ಸಂಖ್ಯೆ:ಪ್ರಶಾವಿಸ/15ನೇವಿಸ/9ಮುಉ/ಪ್ರ.ಸಂ.2609/2021 ದಿನಾಂಕ:14.03.2021.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಭೀಮಾನಾಯ್ಕ.ಎಸ್(ಹಗರಿಬೊಮ್ಮನಹಳ್ಳಿ) ಇವರ ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ:2609ಕ್ಕೆ ಉತ್ತರದ 50 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿದೆ.

ತಮ್ಮ ನಂಬುಗೆಯ,

B. Shashidhara

**(ಶಶಿಧರ.ಬಿ.)**
ಶಾಖಾಧಿಕಾರಿ,
ಶಿಕ್ಷಣ ಇಲಾಖೆ ಪ್ರೌಢ–ಬಿ

## ಕರ್ನಾಟಕ ವಿಧಾನಸಭೆ.

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2609.
ಮಾನ್ಯ ಸದಸ್ಯರ ಹೆಸರು : ಶ್ರೀ ಭೀಮಾ ನಾಯ್ಕ ಎಸ್.(ಹಗರಿಬೊಮ್ಮನಹಳ್ಳಿ).
ಉತ್ತರಿಸುವ ದಿನಾಂಕ : 25.03.2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಹಗರಿ ಬೊಮ್ಮನಹಳ್ಳಿಯ ವಿಧಾನಸಭಾ ಕ್ಷೇತ್ರದ ತಂಬ್ರಹಳ್ಳಿ ಗ್ರಾಮದಲ್ಲಿ ಸರ್ಕಾರಿ ಬಾಲಕಿಯರ ಪ್ರೌಢಶಾಲೆ ಇಲ್ಲದೆ ವಿದ್ಯಾರ್ಥಿಗಳಿಗೆ ತೊಂದರೆ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ | ಬಂದಿದ್ದಲ್ಲಿ, ಪ್ರೌಢಶಾಲೆಯನ್ನು ಯಾವಾಗ ಪ್ರಾರಂಬಿಸಲಾಗುವುದು? | ತಂಬ್ರಹಳ್ಳಿ ವ್ಯಾಪ್ತಿಯಲ್ಲಿ ಈಗಾಗಲೇ ಕಿನ್ನಾಳಾ ಪೊರಾಂಬೆ ಗುರುಸಿದ್ಧಪ್ಪ ಅನುದಾನಿತ ಪ್ರೌಢಶಾಲೆ ಇದ್ದು, ಎಂ.ಹೆಚ್.ಆರ್.ಡಿ ನಿಯಮಾವಳಿಗಳ ಪ್ರಕಾರ 5 ಕಿ.ಮೀ. ವ್ಯಾಪ್ತಿಯಲ್ಲಿ ಯಾವುದೇ ಸರ್ಕಾರಿ/ಅನುದಾನಿತ ಪ್ರೌಢಶಾಲೆಗಳು ಇದ್ದರೆ ಅಂತಹ ಜಾಗಕ್ಕೆ ಮತ್ತೊಂದು ಪ್ರೌಢಶಾಲೆಯನ್ನು ಮಂಜೂರು ಮಾಡಲು ನಿಯಮದಲ್ಲಿ ಅವಕಾಶವಿರುವುದಿಲ್ಲ. |

ಸಂಖ್ಯೆ:ಇಪಿ 151 ಎಸ್‌ಇಎಸ್ 2021

(ಎಸ್.ಸುರೇಶ್‌ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು



**ಕರ್ನಾಟಕ ಸರ್ಕಾರ**

ಸಂಖ್ಯೆ: ಆಕುಕ 77 ಎಸ್‌ಬಿವಿ 2021.

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 24.03.2021.

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸ ಸೌಧ,

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
**ಬೆಂಗಳೂರು.**

ಮಾನ್ಯರೆ,

**ವಿಷಯ:-** ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ವೇದವ್ಯಾಸ ಕಾಮತ್ ಡಿ (ಮಂಗಳೂರು ನಗರ ದಕ್ಷಿಣ) ಇವರ ಚುಕ್ಕೆ ರಹಿತ ಪ್ರ.ಸಂ:1803ಕ್ಕೆ ಉತ್ತರ ನೀಡುವ ಬಗ್ಗೆ.

*****

ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ವೇದವ್ಯಾಸ ಕಾಮತ್ ಡಿ (ಮಂಗಳೂರು ನಗರ ದಕ್ಷಿಣ) ಇವರ ಚುಕ್ಕೆ ರಹಿತ ಪ್ರ.ಸಂ:1803ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

24/3/21
**(ಪದ್ಮ ವಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಆರೋಗ್ಯ 1&2)

<u>ಕರ್ನಾಟಕ ವಿಧಾನ ಸಭೆ</u>

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1803
ಮಾನ್ಯ ಸದಸ್ಯರ ಹೆಸರು : ಶ್ರೀ ವೇದವ್ಯಾಸ ಕಾಮತ್ ಡಿ (ಮಂಗಳೂರು ನಗರ ದಕ್ಷಿಣ)
ಉತ್ತರಿಸಬೇಕಾದ ದಿನಾಂಕ : 25.03.2021
ಉತ್ತರಿಸುವ ಸಚಿವರು : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಆಯುಷ್ಮಾನ್ ಭಾರತ್ ಮತ್ತು ಆರೋಗ್ಯ ಕರ್ನಾಟಕ ಯೋಜನೆಯಡಿ ಸೌಲಭ್ಯ ಪಡೆಯುವ ರೋಗಿಗಳಿಗೆ ಅನುಸೂಚಿತ ಪಟ್ಟಿಯಲ್ಲಿರುವ ಚಿಕಿತ್ಸೆ ಪಡೆಯಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಬಂದಿದ್ದಲ್ಲಿ, ಅನುಸೂಚಿತ ಪಟ್ಟಿಯಲ್ಲಿರುವ ಚಿಕಿತ್ಸೆಯನ್ನು ರೋಗಿಗಳು ಪಡೆಯಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಅನುಸೂಚಿತ ಪಟ್ಟಿಯಲ್ಲಿರುವ ಚಿಕಿತ್ಸೆಯನ್ನು ರೋಗಿಗಳು ಪಡೆಯಲು ಸರ್ಕಾರ ಕೈಗೊಂಡಿರುವ ಕ್ರಮಗಳು ಈ ಕೆಳಕಂಡಂತಿವೆ:<br>1. ನಿರ್ದಿಷ್ಟಪಡಿಸಿರುವ ನೊಂದಣಿ ಕೇಂದ್ರಗಳಲ್ಲಿ ರೋಗಿಗಳು ಮೊದಲ ಬಾರಿಗೆ ಯಾವುದೇ ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಚಿಕಿತ್ಸೆಗಾಗಿ ಮೊದಲ ಬಾರಿಗೆ ಸಂಪರ್ಕಿಸಿದಾಗ ಅಳವಡಿಸಿರುವ ಐಟಿ ಸಾಫ್ಟ್‌ವೇರ್ ಬಳಸಿಕೊಂಡು ಅವರನ್ನು ಒಂದು ಬಾರಿ ನೋಂದಣಿ ಮಾಡಿಕೊಳ್ಳಲಾಗುವುದು. ತುರ್ತು ಸಂದರ್ಭದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರದ ಶಿಫಾರಸಿನ ಹೊರತಾಗಿ ದಾಖಲಿಸಿಕೊಂಡಿರುವ ಖಾಸಗಿ ಆಸ್ಪತ್ರೆಯನ್ನು ಒಬ್ಬ ರೋಗಿಯು ಸಂಪರ್ಕಿಸಿದಲ್ಲಿ ನಿಯೋಜಿತ ದಾಖಲಾತಿ ಕೇಂದ್ರ ಅಥವಾ ಆಸ್ಪತ್ರೆಯಿಂದ ಬಿಡುಗಡೆ ಹೊಂದಿದ ನಂತರ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಸಲ್ಲಿಸಬಹುದು. ಆ ಸನ್ನಿವೇಶದಲ್ಲಿ ಈ ಒಂದು ಚಿಕಿತ್ಸೆಗಾಗಿ ತಮ್ಮ ಆಧಾರ್ ಕಾರ್ಡ್ ಮತ್ತು ಪಡಿತರ ಚೀಟಿಯನ್ನು ಸಲ್ಲಿಸುವ ಮೂಲಕ ಚಿಕಿತ್ಸೆಯನ್ನು ಪಡೆಯಬಹುದು.<br>2. 'ಆಯುಷ್ಮಾನ್ ಭಾರತ್–ಆರೋಗ್ಯ ಕರ್ನಾಟಕ' ಯೋಜನೆಯಡಿಯಲ್ಲಿ ನೋಂದಾಯಿತ ಕಾರ್ಡ್‌ನ್ನು "ಎಬಿ–ಎಆರ್‌ಕೆ" ಕಾರ್ಡ್ ಎಂದು ಕರೆಯಲಾಗುವುದು ಮತ್ತು "ಎಬಿ–ಎಆರ್‌ಕೆ" ಎಂದು ಕರೆಯಲಾಗುವ ಕಾರ್ಡ್‌ನ್ನು ನೋಂದಣಿ ಸಮಯದಲ್ಲಿ ವಿಶಿಷ್ಟ ಐಡಿ ಸಂಖ್ಯೆಯೊಂದಿಗೆ ನೀಡಲಾಗುವುದು.<br>3. ಆಯುಷ್ಮಾನ್ ಭಾರತ್–ಆರೋಗ್ಯ ಕರ್ನಾಟಕ ಯೋಜನೆಯ ಅಡಿಯಲ್ಲಿ "ಎಬಿಎಆರ್‌ಕೆ" ಕಾರ್ಡ್‌ನ್ನು |

| | | |
|---|---|---|
| | | ಸಾರ್ವಜನಿಕ ಆರೋಗ್ಯ ಸಂಸ್ಥೆಗಳಲ್ಲಿ ರೂ.10/- ಶುಲ್ಕದೊಂದಿಗೆ ನೀಡಲಾಗುತ್ತದೆ.<br>4. ಬೆಂಗಳೂರು ಒನ್ ಮತ್ತು ಕರ್ನಾಟಕ ಒನ್ ಸೇವಾ ಸಿಂಧು ಕೇಂದ್ರಗಳಲ್ಲಿ ರೂ. 35 ಶುಲ್ಕದೊಂದಿಗೆ "ಎಬಿಎಆರ್‌ಕೆ" ಕಾರ್ಡ್ ನೀಡಲಾಗುತ್ತದೆ.<br>5. ಒಂದು ವೇಳೆ ಈ ಹೆಲ್ತ್ ಕಾರ್ಡ್ ಕಳೆದುಹೋದರೆ ಯಾವುದೇ ಸಾರ್ವಜನಿಕ ಆರೋಗ್ಯ ಸಂಸ್ಥೆಗಳಲ್ಲಿ ಅಥವಾ ನೋಂದಣಿ ಕೇಂದ್ರಗಳಲ್ಲಿ ಆಧಾರ್ ಅಥವಾ ಪಡಿತರ ಚೀಟಿ ಹಾಜರುಪಡಿಸಿ, ಆಧಾರ್ ದೃಢೀಕರಣದ ನಂತರ ರೂ.20/-(ಇಪ್ಪತ್ತು) ಪಾವತಿಸಿ ನಕಲು ಹೆಲ್ತ್ ಕಾರ್ಡ್‌ನ್ನು ಪಡೆದುಕೊಳ್ಳುವುದು.<br>6. ನೋಂದಾವಣೆಯ ನಂತರ ಸಾರ್ವಜನಿಕ ಆಸ್ಪತ್ರೆಯಲ್ಲಿ ಸಂಬಂಧಪಟ್ಟ ತಜ್ಞ ವೈದ್ಯರು ಸಂಪರ್ಕಿಸಿದಾಗ, ಫಲಾನುಭವಿಯನ್ನು ಆಸ್ಪತ್ರೆಯಲ್ಲಿ ಲಭ್ಯವಿರುವ ಪರೀಕ್ಷಾ ವಿಧಾನಗಳಿಗೆ ಒಳಪಡಿಸಿ ಬೇಕಾಗುವ ಚಿಕಿತ್ಸೆಯನ್ನು ನಿರ್ಧರಿಸಲಾಗುವುದು.<br>7. ತದನಂತರ, ಈ ಚಿಕಿತ್ಸಾ ವಿಧಾನವು ರೋಗಿಯು ಸಂದರ್ಶಿಸಿದ ಆಸ್ಪತ್ರೆಯಲ್ಲಿ ಲಭ್ಯವಿದ್ದಲ್ಲಿ ಅಲ್ಲಿಯೇ ಚಿಕಿತ್ಸೆಯನ್ನು ನೀಡಲಾಗುವುದು.<br>8. ಚಿಕಿತ್ಸೆ ನೀಡಲು ಸದರಿ ಆಸ್ಪತ್ರೆಯಲ್ಲಿ ಸಮರ್ಥತೆ ಅಥವಾ ಸಾಮರ್ಥ್ಯ ಇಲ್ಲದಿದ್ದಲ್ಲಿ ಹೆಚ್ಚುವರಿ ಚಿಕಿತ್ಸೆಗಾಗಿ ಜಿಲ್ಲಾಸ್ಪತ್ರೆ/ವೈದ್ಯಕೀಯ ಶಿಕ್ಷಣ ಸಂಸ್ಥೆಯಲ್ಲಿ ಚಿಕಿತ್ಸೆಗಾಗಿ ರೆಫರಲ್ ಮಾಡಲಾಗುವುದು. ಅಲ್ಲಿಯೂ ಸೌಲಭ್ಯ ಇಲ್ಲದಿದ್ದಲ್ಲಿ ನೋಂದಾಯಿತ ಖಾಸಗಿ ಆಸ್ಪತ್ರೆಯಲ್ಲಿ ರೆಫರಲ್ ಆಧಾರದ ಮೇರೆಗೆ ಚಿಕಿತ್ಸೆಯನ್ನು ಪಡೆಯಬಹುದಾಗಿದೆ. |
| ಇ | ಅನುಸೂಚಿತ ಪಟ್ಟಿಯಲ್ಲಿರುವ ಚಿಕಿತ್ಸೆಗಳೆಷ್ಟು; | ಆಯುಷ್ಮಾನ್ ಭಾರತ್ - ಆರೋಗ್ಯ ಕರ್ನಾಟಕ ಯೋಜನೆಯಡಿ ಅನುಸೂಚಿತ ಪಟ್ಟಿಯಲ್ಲಿರುವ ಚಿಕಿತ್ಸೆಗಳು 1650.<br>ಅನುಸೂಚಿತ ಪಟ್ಟಿಯಲ್ಲಿರುವ ಚಿಕಿತ್ಸೆಗಳನ್ನು 4 ವಿಭಾಗಗಳಾಗಿ ವಿಂಗಡಿಸಿದ್ದು, ಸರ್ಕಾರದ ಆದೇಶ ಸಂಖ್ಯೆ: ಆಕುಕ 69 ಸಿಜಿಇ 2018, ದಿನಾಂಕ:15.11.2018ರ ಅನುಬಂಧ-2ಎ ರಲ್ಲಿ ಸಾಮಾನ್ಯ ದ್ವಿತೀಯ ಹಂತದ ಚಿಕಿತ್ಸೆಗಳಾಗಿದ್ದು, ಈ ಚಿಕಿತ್ಸೆಗಳನ್ನು ಸರ್ಕಾರಿ ಸ್ವಾಮ್ಯದ ಆಸ್ಪತ್ರೆಗಳಲ್ಲಿಯೇ ನಿರ್ವಹಿಸಬೇಕಾಗಿದ್ದು, ಇದರ ಚಿಕಿತ್ಸೆಗಳನ್ನು ಸರ್ಕಾರಿ ಆಸ್ಪತ್ರೆಗಳಿಗೆ ನಿರ್ಬಂಧಿಸಿದೆ ಮತ್ತು ಸ್ವಯಂ ಚಾಲಿತ ಅನುಮೋದನೆ ನೀಡಲಾಗುತ್ತದೆ.<br>ಅನುಬಂಧ - 2ಬಿ ರಡಿಯಲ್ಲಿ ಕ್ಲಿಷ್ಟಕರ ದ್ವಿತೀಯ ಹಂತದ ಚಿಕಿತ್ಸೆಗಳಾಗಿದ್ದು, ಫಲಾನುಭವಿಗಳು ಸರ್ಕಾರಿ ಆಸ್ಪತ್ರೆಗಳನ್ನು ಸಂದರ್ಶಿಸಬೇಕಾಗಿದ್ದು, ಸಮರ್ಥತೆ ಹಾಗೂ ಸಾಮರ್ಥ್ಯದ ಅನುಗುಣವಾಗಿ ಸರ್ಕಾರಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಕೈಗೊಳ್ಳಬಹುದಾಗಿದ್ದು, ಇದರ ಪ್ರಕ್ರಿಯೆ ಸ್ವಯಂ ಚಾಲಿತ |

| | | |
|---|---|---|
| | | ಅನುಮೋದನೆಯಾಗಿರುತ್ತದೆ. ಒಂದು ವೇಳೆ ಸರ್ಕಾರಿ ಆಸ್ಪತ್ರೆಗಳಲ್ಲಿ ಸಮರ್ಥತೆ ಹಾಗೂ ಸಾಮರ್ಥ್ಯವಿಲ್ಲದಿದ್ದಲ್ಲಿ ಉನ್ನತ ಮಟ್ಟದ ಸರ್ಕಾರಿ ಆಸ್ಪತ್ರೆ ಅಥವಾ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಕೈಗೊಳ್ಳಬಹುದಾಗಿದೆ.<br>ಅನುಬಂಧ-3ರಲ್ಲಿ ತೃತೀಯಾ ಹಂತದ ಚಿಕಿತ್ಸಾ ವಿಧಾನಗಳನ್ನು ಗುರುತಿಸಿದ್ದು, ಸರ್ಕಾರಿ ಆಸ್ಪತ್ರೆಗಳನ್ನು ಸಂದರ್ಶಿಸಬೇಕಾಗಿದ್ದು, ಸರ್ಕಾರಿ ಆಸ್ಪತ್ರೆಗಳಲ್ಲಿ ಸಮರ್ಥತೆ ಹಾಗೂ ಸಾಮರ್ಥ್ಯವಿಲ್ಲದಿದ್ದಲ್ಲಿ ಉನ್ನತ ಮಟ್ಟದ ಸರ್ಕಾರಿ ಆಸ್ಪತ್ರೆ ಅಥವಾ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಕೈಗೊಳ್ಳಬಹುದಾಗಿದೆ.<br>ಅನುಬಂಧ-4ರಲ್ಲಿ ತುರ್ತು ಚಿಕಿತ್ಸಾ ವಿಧಾನಗಳನ್ನು ಗುರುತಿಸಿದ್ದು, ಈ ಕಾಯಿಲೆಗಳ ಚಿಕಿತ್ಸೆಗಾಗಿ ಯಾವುದೇ ರೇಫರಲ್ ಇಲ್ಲದೆ ಸರ್ಕಾರಿ ಅಥವಾ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯಬಹುದಾಗಿದೆ.<br><br>ಈಗಾಗಲೇ ನಿಗದಿಪಡಿಸಿರುವ 169 ತುರ್ತು ಚಿಕಿತ್ಸಾ ವಿಧಾನಗಳೊಂದಿಗೆ 76 ಹೆಚ್ಚುವರಿ ಚಿಕಿತ್ಸಾ ವಿಧಾನಗಳನ್ನು ಸೇರ್ಪಡೆಗೊಳಿಸಲು ತಜ್ಞರ ಸಮಿತಿಯಿಂದ ವರದಿ ನೀಡಿದ್ದು, ಈ ಚಿಕಿತ್ಸಾ ವಿಧಾನಗಳನ್ನು ತುರ್ತು ಚಿಕಿತ್ಸಾ ವಿಧಾನಗಳ ಪಟ್ಟಿಗೆ ಸೇರಿಸುವ ಬಗ್ಗೆ ಪರಿಶೀಲನೆಯಲ್ಲಿರುತ್ತದೆ. |
| ಈ | ಅನುಸೂಚಿತ ಪಟ್ಟಿಯಲ್ಲಿರುವ ಚಿಕಿತ್ಸೆಗಳನ್ನು ಆಯುಷ್ಮಾನ್ ಭಾರತ್ ಹಾಗೂ ಆರೋಗ್ಯ ಕರ್ನಾಟಕ ಯೋಜನೆಯಡಿ ಸೇರಿಸಲು ಸರ್ಕಾರದ ಹಂತದಲ್ಲಿ ತೆಗೆದುಕೊಳ್ಳುತ್ತಿರುವ ಕ್ರಮಗಳೇನು; | ಅನುಸೂಚಿತ ಪಟ್ಟಿಯಲ್ಲಿರುವ ಚಿಕಿತ್ಸೆಗಳನ್ನು ಈ ಯೋಜನೆಯಡಿ ಸೇರಿಸಲು ಸರ್ಕಾರಿ/ಖಾಸಗಿ ಆಸ್ಪತ್ರೆಗಳಿಂದ ಹೊಸದಾಗಿ ಬರುವ ಬೇಡಿಕೆಗಳನ್ನು ಕರ್ನಾಟಕ ಪ್ರೈವೇಟ್ ಮೆಡಿಕಲ್ ಎಸ್ಟಾಬ್ಲಿಷ್‌ಮೆಂಟ್ ಅಧಿಸೂಚನೆ ಅಡಿಯಲ್ಲಿರುವ ಉಪ ಸಮಿತಿಯ ಮುಂದೆ ಸಲ್ಲಿಸಿ ತದನಂತರ ಆರ್ಥಿಕ ಇಲಾಖೆಯ ಅನುಮೋದನೆಯೊಂದಿಗೆ ಸೇರಿಸಬಹುದಾಗಿದೆ. |
| ಉ | ಹಾಗಿದ್ದಲ್ಲಿ, ಎಷ್ಟು ಚಿಕಿತ್ಸೆಗಳನ್ನು ಅನುಸೂಚಿತ ಪಟ್ಟಿಯಲ್ಲಿ ಸೇರಿಸಲಾಗಿದೆ? (ಚಿಕಿತ್ಸೆಗಳ ಸಂಪೂರ್ಣ ಮಾಹಿತಿ ನೀಡುವುದು) | ಸರ್ಕಾರಿ ಆದೇಶದ ಅನುಬಂಧ 2ಎ, 2ಬಿ ಹಾಗೂ 3ಎ ಯಲ್ಲಿರುವ 76 ವಿವಿಧ ಚಿಕಿತ್ಸಾ ವಿಧಾನಗಳನ್ನು ರೆಫರಲ್ ಇಲ್ಲದೆಯೇ ನೇರವಾಗಿ ಅನುಬಂಧ-4ರ ತುರ್ತು ಚಿಕಿತ್ಸಾ ವಿಧಾನಗಳ ಪಟ್ಟಿಗೆ ಸೇರಿಸುವ ಬಗ್ಗೆ ಪರಿಶೀಲನೆಯಲ್ಲಿರುತ್ತದೆ. |

ಆಕುಕ 77 ಎಸ್‌ಬಿವಿ 2021.

(ಡಾ॥ ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ: ಆಕುಕ 123 ಹೆಚ್‌ಎಸ್‌ಎಂ 2021

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 24-03-2021

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ:- ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಐಹೋಳೆ ಡಿ. ಮಹಾಲಿಂಗಪ್ಪ (ರಾಯಭಾಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1813ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಐಹೋಳೆ ಡಿ. ಮಹಾಲಿಂಗಪ್ಪ (ರಾಯಭಾಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 1813ಕ್ಕೆ ಉತ್ತರಿಸುವ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು ದಿನಾಂಕ:25-03-2021 ರಂದು ಸದನದಲ್ಲಿ ಉತ್ತರಿಸಬೇಕಾಗಿದ್ದ ಪ್ರಶ್ನೆಗೆ ಉತ್ತರದ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

24/3/2021
(ಯ. ಶಿವಶಂಕರ್)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1813 |
| ಮಾನ್ಯ ಸದಸ್ಯರ ಹೆಸರು | ಶ್ರೀ ಐಹೊಳೆ ಡಿ ಮಹಾಲಿಂಗಪ್ಪ (ರಾಯಭಾಗ) |
| ಉತ್ತರಿಸಬೇಕಾದ ದಿನಾಂಕ | 25-03-2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ನೋವೆಲ್ ಕೊರೊನಾ ವೈರಸ್ ಬಂದ ಸಮಯದಲ್ಲಿ ವೈರಸ್ ಪೀಡಿತ ರೋಗಗಿಳಿಗೆ ಅಗತ್ಯ ಚಿಕಿತ್ಸೆಯನ್ನು ನೀಡಲು ಸರ್ಕಾರಿ ಆಸ್ಪತ್ರೆ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತಿತರೆಡೆಗಳಲ್ಲಿ ಅಗತ್ಯ ಸಿಬ್ಬಂದಿ ಇಲ್ಲದಿರುವ ಕಾರಣ ಅರ್ಹ ನಿರುದ್ಯೋಗಿಗಳನ್ನು ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಂಡು ರೋಗಿಗಳಿಗೆ ಚಿಕಿತ್ಸೆ ಕೊಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ. |
| ಆ | ಹಾಗಿದ್ದಲ್ಲಿ, ತಮ್ಮ ಜೀವದ ಹಂಗು ತೊರೆದು ಪಿ.ಪಿ.ಇ. ಕಿಟ್ ಧರಿಸಿ ರಾಜ್ಯದ ಜನರ ಆರೋಗ್ಯಕ್ಕಾಗಿ ಹಗಲಿರುಳು ದುಡಿದ ವೈದ್ಯರು, ನರ್ಸ್‌ಗಳು, ಲ್ಯಾಬ್‌ಟೆಕ್ನೀಷಿಯನ್‌ಗಳು, ಎ.ಎನ್.ಎಂ.ಗಳು ಫಾರ್ಮಸಿಸ್ಟ್‌ಗಳು ಹಾಗೂ ಗ್ರೂಪ್-ಡಿ ನೌಕರರುಗಳನ್ನು ಪ್ರಸ್ತುತ ಪಡೆಯುತ್ತಿರುವ ವೇತನ ಮತ್ತು ಅದೇ ಹುದ್ದೆಗಳಲ್ಲಿಯೇ ಮುಂದುವರೆಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ತಾತ್ಕಾಲಿಕವಾಗಿ ಗುತ್ತಿಗೆ/ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಂಡಿರುವ ಅಧಿಕಾರಿ/ಸಿಬ್ಬಂದಿಗಳು ಪ್ರಸ್ತುತ ಪಡೆಯುತ್ತಿರುವ ವೇತನದ ವಿವರ ಈ ಕೆಳಗಿನಂತಿದೆ:-<br>1. ವೈದ್ಯರು- 70,000/-<br>2. ನರ್ಸ್‌ಗಳು- 25,000/-<br>3. ಲಾಬ್‌ಟೆಕ್ನೀಷಿಯನ್‌ಗಳು- 20,000/-<br>4. ಎ.ಎನ್.ಎಂ.-15,000/-<br>5. ಫಾರ್ಮಸಿಸ್ಟ್‌ಗಳು-20,000/-<br>6. ಗ್ರೂಪ್-ಡಿ-13,000/-<br>ಕೋವಿಡ್-19ರ ನಿರ್ವಹಣೆಗಾಗಿ ತಾತ್ಕಾಲಿಕವಾಗಿ ನೇಮಿಸಲಾಗಿದ್ದ ಗುತ್ತಿಗೆ/ ಹೊರಗುತ್ತಿಗೆ ಆಧಾರದ ಅಧಿಕಾರಿ/ಸಿಬ್ಬಂದಿಗಳ ಸೇವೆಯನ್ನು ಸರ್ಕಾರದ ಆದೇಶದ ಸಂಖ್ಯೆ: ಆಕುಕ 349 ಹೆಚ್‌ಎಸ್‌ಎಂ 2020, ದಿನಾಂಕ: 19-03-2021 ರಲ್ಲಿ ದಿನಾಂಕ: 30-09-2021ರ ವರೆಗೆ ಮುಂದುವರೆಸಲು ಅನುಮತಿ ನೀಡಲಾಗಿರುತ್ತದೆ. |
| ಇ | ಹಾಗಿಲ್ಲದಿದ್ದಲ್ಲಿ, ಜೀವವನ್ನು ಮುಡಿಪಾಗಿಟ್ಟು ಸೇವೆಗೆ ಬಂದ ಇವರುಗಳ ತಾತ್ಕಾಲಿಕ ಸೇವೆಯನ್ನು ಮುಂದುವರೆಸದಿರಲು ಕಾರಣವೇನು; | ಇಲಾಖೆಯಲ್ಲಿ ಕೋವಿಡ್-19ರ ನಿರ್ವಹಣೆಗಾಗಿ ತಾತ್ಕಾಲಿಕವಾಗಿ ನೇಮಿಸಿಕೊಳ್ಳಲಾಗಿರುವ ಗುತ್ತಿಗೆ/ ಹೊರಗುತ್ತಿಗೆ ಆಧಾರದ ಅಧಿಕಾರಿ/ಸಿಬ್ಬಂದಿಗಳ ಸೇವೆಯನ್ನು ಈಗಾಗಲೇ ದಿನಾಂಕ:30-09-2021ರ ವರೆಗೆ ಮುಂದುವರೆಸಲು ಅನುಮತಿ ನೀಡಲಾಗಿರುವುದರಿಂದ ಈ ಪ್ರಶ್ನೆಗಳು ಉದ್ಭವಿಸುವುದಿಲ್ಲ. |
| ಈ | ಈ ತಾತ್ಕಾಲಿಕ ನೇಮಕಾತಿ ಹೊಂದಿದವರುಗಳ ಜೀವನ ನಿರ್ವಹಣೆ ಸಹಾಯ ಮಾಡಲು ಸರ್ಕಾರ ಆಸಕ್ತಿ ಹೊಂದಿದೆಯೇ; | |
| ಉ | ಇಲ್ಲವಾದಲ್ಲಿ, ಕಾರಣಗಳೇನು? (ವಿವರ ನೀಡುವುದು) | |

ಸಂಖ್ಯೆ: ಆಕುಕ 123 ಹೆಚ್‌ಎಸ್‌ಎಂ 2021

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು



ಕರ್ನಾಟಕ ಸರ್ಕಾರ

ಸಂಖ್ಯೆ: ಆಕುಕ 122 ಹೆಚ್‌ಎಸ್‌ಎಂ 2021

ಕರ್ನಾಟಕ ಸರ್ಕಾರದ ಸಚಿವಾಲಯ
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 24-03-2021

ಇವರಿಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸ ಸೌಧ, ಬೆಂಗಳೂರು.

10 ಲ15
25/3/21

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೆ,

ವಿಷಯ:- ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಐಹೋಳೆ ಡಿ. ಮಹಾಲಿಂಗಪ್ಪ (ರಾಯಭಾಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2039ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಐಹೋಳೆ ಡಿ. ಮಹಾಲಿಂಗಪ್ಪ (ರಾಯಭಾಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2039ಕ್ಕೆ ಉತ್ತರಿಸುವ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು ದಿನಾಂಕ:25-03-2021 ರಂದು ಸದನದಲ್ಲಿ ಉತ್ತರಿಸಬೇಕಾಗಿದ್ದ ಪ್ರಶ್ನೆಗೆ ಉತ್ತರದ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಯು. ಶಿವಶಂಕರ್) 24/3/2021
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | **2039** |
| ಮಾನ್ಯ ಸದಸ್ಯರ ಹೆಸರು | ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ) |
| ಉತ್ತರಿಸಬೇಕಾದ ದಿನಾಂಕ | **25-03-2021** |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಸರ್ಕಾರದ ಫಾರ್ಮಾಸಿಸ್ಟ್ ಸಂಘದಲ್ಲಿ ಕಾರ್ಯ ನಿರ್ವಹಿಸುತ್ತಿರುವ ನೌಕರರ ವೇತನ ಮತ್ತು ಭತ್ಯೆಗಳನ್ನು ಪರಿಷ್ಕರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಇಲ್ಲ. |
| ಆ | ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಈ ನೌಕರರ ವೇತನ, ಭತ್ಯೆಗಳನ್ನು ಪರಿಷ್ಕರಿಸಿ ನೌಕರರಿಗೆ ಅನುಕೂಲ ಕಲ್ಪಿಸಿಕೊಡಲಾಗುವುದು; | ಅನ್ವಯಿಸುವುದಿಲ್ಲ. |
| ಇ | ಇಲ್ಲದಿದ್ದಲ್ಲಿ, ಪ್ರಸಕ್ತ ವರ್ಷದಲ್ಲಿ ಆಯವ್ಯಯದಲ್ಲಿ ಇವರ ವೇತನ ಭತ್ಯೆಗಳನ್ನು ಪರಿಷ್ಕರಿಸಲು ಸರ್ಕಾರವು ಅಗತ್ಯ ಕ್ರಮ ಕೈಗೊಳ್ಳುವುದೇ; | ಸರ್ಕಾರಿ ನೌಕರರ ಸಂಘಗಳಲ್ಲಿನ ಕೆಲಸ-ಕಾರ್ಯಗಳಿಗೆ ಸಂಬಂಧಿಸಿದಂತೆ ಸಿಬ್ಬಂದಿಗಳನ್ನು ಸಂಘಗಳ ವತಿಯಿಂದಲೇ ಖಾಸಗಿಯಾಗಿ ನೇಮಕ ಮಾಡಿಕೊಳ್ಳುವುದರಿಂದ ಸರ್ಕಾರ ಅವರ ವೇತನ ಭತ್ಯೆಗಳ ಬಗ್ಗೆ ಕ್ರಮವಹಿಸುವುದಿಲ್ಲ. |
| ಈ | ಫಾರ್ಮಾಸಿಸ್ಟ್ ಸಂಘದಲ್ಲಿ ಕಾರ್ಯ ನಿರ್ವಹಿಸುತ್ತಿರುವ ನೌಕರರ ವೇತನ, ಭತ್ಯೆಗಳನ್ನು ಪರಿಷ್ಕರಿಸುವಲ್ಲಿ ಆಗುತ್ತಿರುವ ವಿಳಂಬಕ್ಕೆ ಕಾರಣವೇನು? (ವಿವರ ನೀಡುವುದು) | |

ಸಂಖ್ಯೆ: ಆಕುಕ 122 ಹೆಚ್‌ಎಸ್‌ಎಂ 2021

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು



**ಕರ್ನಾಟಕ ಸರ್ಕಾರ**

ಸಂಖ್ಯೆ: ಆಕುಕ 74 ಎಸ್‌ಬಿವಿ 2021.

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 24.03.2021.

GH U/S
25/3/21

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸ ಸೌಧ,

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
**ಬೆಂಗಳೂರು.**

ಮಾನ್ಯರೆ,

**ವಿಷಯ:-** ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) ಇವರ ಚುಕ್ಕೆ ರಹಿತ ಪ್ರ.ಸಂ:2056ಕ್ಕೆ ಉತ್ತರ ನೀಡುವ ಬಗ್ಗೆ.

*****

ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) ಇವರ ಚುಕ್ಕೆ ರಹಿತ ಪ್ರ.ಸಂ:2056ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

24/3/21
(ಪದ್ಮ ವಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಆರೋಗ್ಯ 1&2)

24/03

## ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 2056
**ಮಾನ್ಯ ಸದಸ್ಯರ ಹೆಸರು** : ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ)
**ಉತ್ತರಿಸಬೇಕಾದ ದಿನಾಂಕ** : 25.03.2021
**ಉತ್ತರಿಸುವ ಸಚಿವರು** : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಆಯುಷ್ಮಾನ್ ಭಾರತ್ – ಆರೋಗ್ಯ ಕರ್ನಾಟಕ ಯೋಜನೆಯಲ್ಲಿ ಕೆಲವು ಗಂಭೀರ ಕಾಯಿಲೆಗಳು ಮತ್ತು ಜೀವನ ಪರ್ಯಾಂತ ಚಿಕಿತ್ಸೆ ಪಡೆಯಬೇಕಾದ ಕಾಯಿಲೆಗಳು ಸೇರದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಸದರಿ ಯೋಜನೆಯಲ್ಲಿ ಬಿಟ್ಟು ಹೋದ (ಉದಾ:ಡಯಾಲಿಸಿಸ್, ನ್ಯೂಕ್ಲಿಯರ್ ಮೆಡಿಸಿನ್, ಜೆ.ಬಿ.ಸಿಂಡ್ರೋಮ್, ಬೋನ್ ಮ್ಯಾರೋ ಟ್ರಾನ್ಸ್‌ಪ್ಲಾಂಟ್ ಇತ್ಯಾದಿ) ಕಾಯಿಲೆಗಳನ್ನು ಸೇರ್ಪಡೆ ಮಾಡಿ, ಬಡ ರೋಗಿಗಳಿಗೆ ಸರ್ಕಾರ ನೆರವಾಗುವುದೇ? | ಹೌದು,<br><br>ಆಯುಷ್ಮಾನ್ ಭಾರತ್ – ಆರೋಗ್ಯ ಕರ್ನಾಟಕ ಯೋಜನೆಯಡಿಯಲ್ಲಿ ಕಿಡ್ನಿ ಡಯಾಲಿಸಿಸ್ ಸೌಲಭ್ಯಕ್ಕಾಗಿ 2A.S1.00214, 2A.S1.00252, 3A.M3.00004 ಪ್ಯಾಕೇಜ್ ಕೋಡ್‌ಗಳು ಲಭ್ಯವಿದ್ದು, ಈ ಪ್ಯಾಕೇಜ್‌ಗಳನ್ನು ಡಯಾಲಿಸಿಸ್‌ಗಳಿಗಾಗಿ ಬಳಸಿಕೊಳ್ಳಬಹುದಾಗಿದೆ.<br><br>ನ್ಯೂಕ್ಲಿಯರ್ ಮೆಡಿಸಿನ್ ಸೌಲಭ್ಯವು ಕೆಲವು ಚಿಕಿತ್ಸೆಗಳನ್ನು ಗುರುತಿಸುವುದಕ್ಕಾಗಿ ಹಾಗೂ ಚಿಕಿತ್ಸೆಗಾಗಿ ಬಳಸುತ್ತಿದ್ದು, ಈ ಪ್ಯಾಕೇಜ್ ಕೋಡ್‌ಗಳು ಅಲ್ಪ ಪ್ರಮಾಣದಲ್ಲಿ ಲಭ್ಯವಿರುತ್ತದೆ.<br><br>ಜೆ.ಬಿ.ಸಿಂಡ್ರೋಮ್‌ಗಾಗಿ ವೈದ್ಯಕೀಯ ತಜ್ಞತೆಯಲ್ಲಿ ಸಾಮಾನ್ಯ ಚಿಕಿತ್ಸೆಗಾಗಿ 2B.M1.00061, A, B, C ಹಾಗೂ ಶಿಶುರೋಗ ತಜ್ಞತೆಯಲ್ಲಿ 4A.M2.00082, A, B, C ಪ್ಯಾಕೇಜ್ ಸೌಲಭ್ಯಗಳು ಇರುತ್ತವೆ, ಇಂತಹ ಗಂಭೀರ ಕಾಯಿಲೆಯಿಂದ ಆಗುತ್ತಿರುವ ಪರಿಣಾಮಗಳಿಗಾಗಿ ಚಿಕಿತ್ಸಾ ಪ್ಯಾಕೇಜ್ ಕೋಡ್‌ಗಳಿದ್ದು, ಇದರ ಚಿಕಿತ್ಸೆಗಾಗಿ ಬಳಸಿಕೊಳ್ಳಬಹುದಾಗಿದೆ.<br><br>ಬೋನ್ ಮ್ಯಾರೋ ಟ್ರಾನ್ಸ್‌ಪ್ಲಾಂಟ್ ಚಿಕಿತ್ಸಾ ವಿಧಾನವು ಸೇರ್ಪಡೆಗೊಳಿಸುವ ಬಗ್ಗೆ ಪ್ರಸ್ತಾವನೆ ಪರಿಶೀಲನೆಯಲ್ಲಿದೆ. |

ಆಕುಕ 74 ಎಸ್‌ಬಿವಿ 2021.

(ಡಾ॥ ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು



**ಕರ್ನಾಟಕ ಸರ್ಕಾರ**

ಸಂಖ್ಯೆ: ಆಕುಕ 10 ಎಸ್‌ಬಿವಿ 2021.

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 24.03.2021.

**ಇವರಿಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ವಿಕಾಸ ಸೌಧ,

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ,
**ಬೆಂಗಳೂರು.**

ಮಾನ್ಯರೆ,

**ವಿಷಯ:-** ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ (ಉಡುಪಿ) ಇವರ ಚುಕ್ಕೆ ರಹಿತ ಪ್ರ.ಸಂ:3832ಕ್ಕೆ ಉತ್ತರ ನೀಡುವ ಬಗ್ಗೆ.

*****

ಮಾನ್ಯ ಕರ್ನಾಟಕ ವಿಧಾನ ಸಭೆಯ ಸದಸ್ಯರಾದ ಶ್ರೀ ರಘುಪತಿ ಭಟ್ ಕೆ (ಉಡುಪಿ) ಇವರ ಚುಕ್ಕೆ ರಹಿತ ಪ್ರ.ಸಂ:3832ಕ್ಕೆ ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,
24/3/21
**(ಪದ್ಮ ವಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಆರೋಗ್ಯ 1&2)
24/03

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3832

ಮಾನ್ಯ ಸದಸ್ಯರ ಹೆಸರು : ಶ್ರೀ ರಘುಪತಿ ಭಟ್ ಕೆ (ಉಡುಪಿ)

ಉತ್ತರಿಸಬೇಕಾದ ದಿನಾಂಕ : 25.03.2021

ಉತ್ತರಿಸುವ ಸಚಿವರು : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಕೇಂದ್ರ ಸರ್ಕಾರವು ಜಾರಿಗೆ ತಂದಿರುವ ಆರೋಗ್ಯ ಕಲ್ಯಾಣ ಕಾರ್ಯಕ್ರಮದಡಿ ಆಯುಷ್ಮಾನ್ ಭಾರತ್ ಯೋಜನೆಯನ್ನು ರಾಜ್ಯದಲ್ಲಿ ಪರಿಣಾಕಾರಿಯಾಗಿ ಅನುಷ್ಠಾನಗೊಳಿಸುವಲ್ಲಿ ಇರುವ ಕೆಲವೊಂದು ನ್ಯೂನ್ಯತೆಗಳನ್ನು ಸರ್ಕಾರ ಗಮನಿಸಿದೆಯೆ; | ಹೌದು. |
| ಆ | ಈ ಯೋಜನೆಯಡಿ ಚಿಕಿತ್ಸೆ ಪಡೆಯಬೇಕಾದ ರೋಗಿಯು ಜಿಲ್ಲಾ ಸರ್ಕಾರಿ ಆಸ್ಪತ್ರೆಯಿಂದ ಉಲ್ಲೇಖಿತ ಪತ್ರ (Referral letter) ತರಬೇಕು ಎಂಬ ನೀತಿಯನ್ನು ಕೇಂದ್ರ ಸರ್ಕಾರದ ಮಾರ್ಗಸೂಚಿಯಲ್ಲಿ ಅಳವಡಿಸಲಾಗಿದೆಯೇ; (ಪ್ರತಿಯನ್ನು ಲಗತ್ತಿಸುವುದು) | ಇಲ್ಲ. |
| ಇ | ಈ ಯೋಜನೆಯಡಿ ಬಡ ರೋಗಿಗಳಿಗೆ ಹಾಗೂ ತುರ್ತು ಚಿಕಿತ್ಸೆಗೆ ಸಂಬಂಧಿಸಿದಂತೆ ಖಾಸಗಿ ಆಸ್ಪತ್ರೆಗಳು ತಕ್ಷಣದಲ್ಲಿ ಸಮರ್ಪಕವಾಗಿ ಸ್ಪಂದಿಸಿ ಸೂಕ್ತ ಚಿಕಿತ್ಸೆ ನೀಡುವಲ್ಲಿ ಇಲಾಖೆ ಕೈಗೊಂಡ ಪರಿಣಾಮಕಾರಿ ಕ್ರಮಗಳೇನು; | ಆಯುಷ್ಮಾನ್ ಭಾರತ್-ಆರೋಗ್ಯ ಕರ್ನಾಟಕ ಯೋಜನೆಯಡಿ ಬಡ ರೋಗಿಗಳು ಯೋಜನೆಯಡಿ ಗುರುತಿಸಿರುವ ಅನುಬಂಧ-4ರಡಿಯಲ್ಲಿರುವ ತುರ್ತು ಚಿಕಿತ್ಸಾ ವಿಧಾನ ಸಂದರ್ಭದಲ್ಲಿ ಯಾವುದೇ ರೆಫರಲ್ ಇಲ್ಲದೇ ನೇರವಾಗಿ ಸರ್ಕಾರಿ / ಖಾಸಗಿ ನೋಂದಾಯಿತ ಆಸ್ಪತ್ರೆಗಲ್ಲಿ ಚಿಕಿತ್ಸೆ ಪಡೆಯಬಹುದಾಗಿದೆ.<br>ಈ ತರಹದ ರೋಗಿಗಳಿಗೆ ಸಮಯೋಚಿತ ಚಿಕಿತ್ಸಾ ವಿಧಾನವನ್ನು ಪ್ರಾರಂಭಿಸಿ ಆ ನಂತರ 24 ಗಂಟೆಗಳೊಳಗೆ ಪೂರ್ವಾನುಮತಿಗೆ ಸಲ್ಲಿಸುವ ವಿಧಾನವನ್ನು ಕಲ್ಪಿಸಿದೆ ಅದರಂತೆ ಅನುಬಂಧ-4ರಲ್ಲಿ 169 ಚಿಕಿತ್ಸಾ ವಿಧಾನಗಳನ್ನು ಗುರುತಿಸಲಾಗಿದೆ.<br>ಈಗಾಗಲೇ ನಿಗದಿಪಡಿಸಿರುವ 169 ತುರ್ತು ಚಿಕಿತ್ಸಾ ವಿಧಾನಗಳೊಂದಿಗೆ 76 ಹೆಚ್ಚುವರಿ ಚಿಕಿತ್ಸಾ ವಿಧಾನಗಳನ್ನು ಸೇರ್ಪಡೆಗೊಳಿಸಲು ತಜ್ಞರ ಸಮಿತಿಯಿಂದ ವರದಿ ನೀಡಿದ್ದು, ಈ ಚಿಕಿತ್ಸಾ ವಿಧಾನಗಳನ್ನು ತುರ್ತು ಚಿಕಿತ್ಸಾ ವಿಧಾನಗಳ ಪಟ್ಟಿಗೆ ಸೇರಿಸುವ ಬಗ್ಗೆ ಪರಿಶೀಲನೆಯಲ್ಲಿರುತ್ತದೆ. |

| ಈ | ಚಿಕಿತ್ಸೆ ನೀಡುವಲ್ಲಿ ಸ್ಪಂದಿಸದ ಆಸ್ಪತ್ರೆಗಳ ವಿರುದ್ಧ ಯಾವ ಕ್ರಮವನ್ನು ಕೈಗೊಳ್ಳಲಾಗುವುದು; ಈ ಬಗ್ಗೆ ದೂರುಗಳು ಬಂದಿರುತ್ತವೆಯೇ? (ಸಂಪೂರ್ಣ ವಿವರ ನೀಡುವುದು) | ಚಿಕಿತ್ಸೆಗೆ ಸ್ಪಂದಿಸದ ಅಥವಾ ಚಿಕಿತ್ಸೆ ನಿರಾಕರಣೆಗೆ ಸಂಬಂಧಿಸಿದಂತೆ ಆಸ್ಪತ್ರೆಯೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆಯಲ್ಲಿ ಈ ಕೆಳಗಿನಂತೆ ಕ್ರಮಗಳನ್ನು ಜರುಗಿಸಲಾಗುತ್ತದೆ.<br>1. ಎಸ್.ಎ.ಎಸ್.ಟಿ ಸಹಾಯವಾಣಿಯ ಮೂಲಕ ರೋಗಿಗಳನ್ನು ಸಂಪರ್ಕಿಸಿ ಚಿಕಿತ್ಸೆ ನೀಡುವಲ್ಲಿ ಸ್ಪಂದಿಸದ ಆಸ್ಪತ್ರೆಗಳ ರೋಗಿಗಳಿಂದ ದೂರು ಪಡೆದು ಅಂತಹ ಆಸ್ಪತ್ರೆಗಳಿಗೆ ನೋಟಿಸ್ ನೀಡಲಾಗುವುದು.<br>2. ಪದೇ ಪದೇ ಚಿಕಿತ್ಸೆ ನಿರಾಕರಣೆಯ ದೂರುಗಳು ದಾಖಲಾದಲ್ಲಿ ಅಂತಹ ಆಸ್ಪತ್ರೆಗಳಗೆ ದಂಡ ವಿಧಿಸಲಾಗುವುದು ಹಾಗೂ Watchlist ನಲ್ಲಿ ಇಡಲಾಗುವುದು.<br>3. ಆಸ್ಪತ್ರೆಯನ್ನು ತಾತ್ಕಾಲಿಕವಾಗಿ ಅಮಾನತ್ತುಗೊಳಿಸಲಾಗುವುದು ಹಾಗೂ ತನಿಖಾಧಿಕಾರಿಗಳಿಂದ ತನಿಖೆ ನಡೆಸಿ ಆರೋಪ ಸಾಬೀತಾದಲ್ಲಿ ಅಂತಹ ಆಸ್ಪತ್ರೆಯ ಪ್ರಕರಣವನ್ನು 'ನೋಂದಾವಣೆ ಮತ್ತು ಶಿಸ್ತು ಸಮಿತಿ'ಯ ಮುಂದೆ ಇರಿಸಿ ಆಸ್ಪತ್ರೆಯ ನೋಂದಾವಣೆಯನ್ನು ರದ್ದುಗೊಳಿಸಲಾಗವುದು.<br>ಈ ಬಗ್ಗೆ ಬಂದಿರುವ ದೂರುಗಳ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ |
|---|---|---|

ಆಕುಕ 70 ಎಸ್‌ಬಿವಿ 2021.

(ಡಾ॥ ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3832 ಕ್ಕೆ ಅನುಬಂಧ.

ANNEXURE TO L.A.Q. NO. 3238.

## Denial of treatment under AB-ArK Scheme

| Sl.No. | Name of the complainant | Description | Hospital Name | Action Taken | Penalty imposed on hospital |
|---|---|---|---|---|---|
| 1 | Mr. Bhaskar (Indira V.) 9742001297 No. A-407, LIC HFL CARE HOMES, Madanayakanahalli, Bangalore. | Denied treatment under AB-Ark Scheme, the hospital has treated as private patient | Kasturba Hospital, Manipal, Udupi | Amount refunded Rs. 67848/- | Rs. 135696 |
| 2 | Patient Anitha K. D/O. T.C Krishnamurthy S/o Chittaiah, Yalladakere V&P, Hiriyur Tq, Chitradurga Dist - 577598 | Denied treatment under AB-Ark Scheme, the hospital has treated as private patient | S.S. Hospital, Davanagere. | Amount refunded Rs. 13017/- | Rs.119910 |
| 3 | Shri. Krishnamurthy Son of Nagaraj, Kalladevapur, Davanagere. | Denied treatment under AB-Ark Scheme, the hospital has treated as private patient | S S Hospital, Davanagere. | Amount refunded Rs. 46938 | |
| 4 | Yamanavva Hanumappa Kurubr Ilal, Tq: Hunagund, Dist: Bagalkot – 587202 | Denied treatment under AB-Ark Scheme, the hospital has treated as private patient | Daddenavar Hospital, Navanagar, Bagalkot 587103. | Amount refunded by hospital Rs 54,251/- | 0 |
| 5 | Smt. Shivagangamma Tq: Gubbi, Dist: Tumkur Mob: 906679086 | Denied treatment under AB-Ark Scheme, the hospital has treated as private patient | St. Johns Medical College Hospital, Bengaluru | Show cause notice issued to the hospital and the hospital reply is not proper hence the cases are referred to DGRC. | Cases referred to DGRC for further action. |
| 6 | Smt: Manjushree Mob: 9900489401 | Denied treatment under AB-Ark Scheme, the hospital has treated as private patient | | | |
| 7 | Anand, Kaveripur, Kamakshipalya, Bengaluru - 560079. | Denied treatment under AB-Ark Scheme, the hospital has treated as private patient | Emergency and Trauma Centre, BMC & RI, Victoria Hospital, B'lore. | Show cause notice issued to the hospital and the hospital reply is not proper hence the cases are referred to DGRC. | Referred to DGRC for further action. |
| 8 | Smt. Prema Manjunath Naik Honnavar, D. K. District. | Denied treatment under AB-Ark Scheme, the hospital has treated as private patient | Kasturba Hospital, Manipal, Udupi | Patient filed case in Hon'ble High Court of Karnataka, Dharawad Bench and the court has ordered for refund of the amount spent by the patient. The hospital has also agreed for refund of the amount to the patient. | Amount of Rs. 431380/- |



ಕರ್ನಾಟಕ ಸರ್ಕಾರ

ಸಂಖ್ಯೆ: ಅಪಜೀ 48 ಎಫ್‌ಎಎಫ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಡಾ. ಬಿ.ಆರ್.ಅಂಬೇಡ್ಕರ್ ವೀಧಿ
ಬೆಂಗಳೂರು, ದಿನಾಂಕ:24.03.2021.

ಇಂದ,
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು.

ಇವರಿಗೆ,
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

25/3/21

ಮಾನ್ಯರೆ,

**ವಿಷಯ:** ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್.ಕೆ. (ಸಕಲೇಶಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3707ಕ್ಕೆ ಉತ್ತರಿಸುವ ಬಗ್ಗೆ.

**ಉಲ್ಲೇಖ:** ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಮುಉ/ಪ್ರ.ಸಂ.3707/2021, ದಿನಾಂಕ: 15.03.2021.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್.ಕೆ. (ಸಕಲೇಶಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3707ಕ್ಕೆ ಸಂಬಂಧಿಸಿದಂತೆ, ಕನ್ನಡ ಭಾಷೆಯಲ್ಲಿ 25 ಉತ್ತರದ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿದೆ ಮತ್ತು ಪಿ.ಡಿ.ಎಫ್. ಮಾದರಿಯಲ್ಲಿ ಪ್ರಶ್ನೆ ಶಾಖೆಯ ಇ–ಮೇಲ್ ವಿಳಾಸ dsqb-kla-kar@nic.in ಕ್ಕೆ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ನಿಮ್ಮ ನಂಬುಗೆಯ,

ಎಂ.ಎಸ್.ಲೀಲಾವತಿ 24/03/2021
(ಎಂ.ಎಸ್.ಲೀಲಾವತಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಜೀವಿ ಪರಿಸ್ಥಿತಿ ಮತ್ತು ಪರಿಸರ ಇಲಾಖೆ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3707
ಸದಸ್ಯರ ಹೆಸರು : ಶ್ರೀ ಕುಮಾರಸ್ವಾಮಿ ಹೆಚ್.ಕೆ. (ಸಕಲೇಶಪುರ)
ಉತ್ತರಿಸಬೇಕಾದ ದಿನಾಂಕ : 25.03.2021
ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಾಡಾನೆ ಹಾವಳಿ ತಪ್ಪಿಸಲು ಸಕಲೇಶಪುರ ತಾಲ್ಲೂಕಿನಲ್ಲಿ ಭೂಸ್ವಾಧೀನ ಪಡಿಸಿಕೊಳ್ಳುವ ಪ್ರಸ್ತಾವನೆ ಸರ್ಕಾರದ ಮುಂದೆ ಇದೆಯೇ; | ಪ್ರಸ್ತುತ ಸರ್ಕಾರದ ಮುಂದೆ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |
| ಆ) | ಆ ಭಾಗದ ಗ್ರಾಮಸ್ಥರು ಸ್ವ ಇಚ್ಚೆಯಿಂದ ಭೂಮಿ ನೀಡಲು ಮುಂದೆ ಬಂದಿರುವುದು ನಿಜವೇ; | |
| ಇ) | ಭೂಸ್ವಾಧೀನ ಪಡಿಸಿಕೊಳ್ಳುವ ಇತ್ತೀಚಿನ ಪ್ರಗತಿಯ ವಿವರವೇನು? | |

**ಸಂಖ್ಯೆ: ಅಪಜೀ 48 ಎಫ್‌ಎಎಫ್ 2021**

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು.



ಕರ್ನಾಟಕ ಸರ್ಕಾರ

ಕ್ರಮಾಂಕ: ಇಡಿ 12 ಯುಡಿವಿ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ: 23-03-2021

200
U/S
25/03/2021

**ಇಂದ,**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಉನ್ನತ ಶಿಕ್ಷಣ ಇಲಾಖೆ,
ಬೆಂಗಳೂರು – 560 001.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೆ,**

**ವಿಷಯ:-** ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಸುಕುಮಾರ್ ಶೆಟ್ಟಿ, ಬಿ.ಎಂ (ಬೈಂದೂರು), ಇವರ ಚುಕ್ಕೆ ಗುತಿಲ್ಲದ ಪ್ರಶ್ನೆ ಸಂಖ್ಯೆ:3854ಕ್ಕೆ ಉತ್ತರಿಸುವ ಬಗ್ಗೆ.

---

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಸುಕುಮಾರ್ ಶೆಟ್ಟಿ, ಬಿ.ಎಂ (ಬೈಂದೂರು), ಇವರ ಚುಕ್ಕೆ ಗುತಿಲ್ಲದ ಪ್ರಶ್ನೆ ಸಂಖ್ಯೆ:3854ಕ್ಕೆ ಸಂಬಂಧಿಸಿದ ಉತ್ತರಗಳ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ (**ಮಿಂಚಂಚೆ ಮೂಲಕವು ಸಹ ಕಳುಹಿಸಲಾಗಿದೆ**) ಮುಂದಿನ ಅಗತ್ಯ ಕ್ರಮಕ್ಕಾಗಿ ತಮಗೆ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

Shilpa

(ಶಿಲ್ಪ.ಕೆ)
ಶಾಖಾಧಿಕಾರಿ
ಉನ್ನತ ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು-2)

23/3/21



# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3854 |
| ಮಾನ್ಯ ಸದಸ್ಯರ ಹೆಸರು | ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ (ಬೈಂದೂರು) |
| ಉತ್ತರಿಸುವ ಸಚಿವರು | ಮಾನ್ಯ ಉಪ ಮುಖ್ಯಮಂತ್ರಿಗಳು (ಉನ್ನತ ಶಿಕ್ಷಣ) |
| ಉತ್ತರಿಸಬೇಕಾದ ದಿನಾಂಕ | 25.03.2021 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಮಂಗಳೂರು ವಿಶ್ವವಿದ್ಯಾಲಯದಲ್ಲಿ ಕುಂದ ಕನ್ನಡ ಭಾಷೆ ಅಧ್ಯಯನ ಪೀಠ ಸ್ಥಾಪನೆ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ರಾಜ್ಯದಲ್ಲಿ ಕೋವಿಡ್-19 ಪ್ರಸರಣೆಯಿಂದ ಉಂಟಾದ ಪರಿಸ್ಥಿತಿಯನ್ನು ನಿಭಾಯಿಸಿ ಆರ್ಥಿಕ ಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ ಸಂಪನ್ಮೂಲವನ್ನು ಕ್ರೂಡೀಕರಿಸುವುದು ಅಗತ್ಯವಾಗಿದ್ದು, ಇದಕ್ಕಾಗಿ ಸರ್ಕಾರದ ವೆಚ್ಚದ ಬಾಬ್ತಿನಲ್ಲಿ ಮಿತವ್ಯಯ ಪಾಲಿಸುವ ಅವಶ್ಯಕತೆ ಇರುವ ಕಾರಣ ಮಂಗಳೂರು ವಿಶ್ವವಿದ್ಯಾಲಯದಲ್ಲಿ ಪ್ರಸಕ್ತ ಸಾಲಿನಲ್ಲಿ **ಕುಂದಾ ಕನ್ನಡ ಭಾಷೆ ಅಧ್ಯಯನ ಪೀಠ ಸ್ಥಾಪನೆ ಮಾಡುವ** ಪ್ರಸ್ತಾವನೆಯನ್ನು ಕೈಬಿಡಲಾಗಿದೆ. |
| (ಆ) | ಹಾಗಿದ್ದಲ್ಲಿ, ಪ್ರಸ್ತುತ ಯಾವ ಹಂತದಲ್ಲಿದೆ; | |
| (ಇ) | ಕನ್ನಡ ಭಾಷೆಯಲ್ಲಿ ಹಲವಾರು ಉಪ ಭಾಷೆಗಳಿದ್ದು, ಅದರಲ್ಲಿ ಕುಂದ ಕನ್ನಡ ಹಲವು ವಿಶೇಷತೆಗಳನ್ನು ಒಳಗೊಂಡಿದ್ದು, ಇದರ ಉಳಿವಿಗಾಗಿ ಕುಂದ ಕನ್ನಡ ಭಾಷೆ ಅಧ್ಯಯನ ಪೀಠ ಸ್ಥಾಪನೆ ಮಾಡುವ ಅಗತ್ಯವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |

**ಸಂಖ್ಯೆ: ಇಡಿ 12 ಯುಡಿವಿ 2021**

**(ಡಾ. ಅಶ್ವತ್ ನಾರಾಯಣ ಸಿ.ಎನ್)**
ಉಪ ಮುಖ್ಯಮಂತ್ರಿ (ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ)



**ಕರ್ನಾಟಕ ಸರ್ಕಾರ**

ಸಂಖ್ಯೆ: ಎಂಇಡಿ/206/ಎಂಪಿಎಸ್/2021

ಕರ್ನಾಟಕ ಸರ್ಕಾರದ ಸಚಿವಾಲಯ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ:24.03.2021

176
U/S
25/03/2021

**ಇವರಿಂದ:**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ವೈದ್ಯಕೀಯ ಶಿಕ್ಷಣ ಇಲಾಖೆ,
ಬಹುಮಹಡಿಗಳ ಕಟ್ಟಡ,
ಬೆಂಗಳೂರು-560001.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೆ,

***ವಿಷಯ:*** ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಶ್ರೀನಿವಾಸ್ ಎಂ.(ಮಂಡ್ಯ) ಇವರ ಚುಕ್ಕೆ ಗುರುತಿಲ್ಲದ ಪ್ರ.ಸಂ:3900ಕ್ಕೆ ಉತ್ತರ ನೀಡುವ ಬಗ್ಗೆ.

>><<

ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಶ್ರೀನಿವಾಸ್ ಎಂ.(ಮಂಡ್ಯ) ಇವರ ಚುಕ್ಕೆ ಗುರುತಿಲ್ಲದ ಪ್ರ.ಸಂ:3900ಕ್ಕೆ ಉತ್ತರವನ್ನು ಸಿದ್ದಪಡಿಸಿ ಇದರೊಂದಿಗೆ 25 ಪ್ರತಿಗಳಲ್ಲಿ ಲಗತ್ತಿಸಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

24/3/21

(ಜೆ.ಕುಮಾರಸ್ವಾಮಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ವೈದ್ಯಕೀಯ ಶಿಕ್ಷಣ ಇಲಾಖೆ.



# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3900
2. ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ ಎಂ.(ಮಂಡ್ಯ)
3. ಉತ್ತರಿಸಬೇಕಾದ ದಿನಾಂಕ : 25.03.2021.
4. ಉತ್ತರಿಸಬೇಕಾದ ಸಚಿವರು : ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| (ಅ) | ಮಂಡ್ಯ ವೈದ್ಯಕೀಯ ವಿಜ್ಞಾನ ಸಂಸ್ಥೆಗೆ ಸೇರಿದ ಜಾಗವನ್ನು ಬೇರೆಯವರು ಅತಿಕ್ರಮಿಸಿಕೊಂಡಿದ್ದನ್ನು ತೆರವುಗೊಳಿಸಲು ನ್ಯಾಯಾಲಯದ ಆದೇಶವಾದರೂ ಇದುವರೆಗೂ ತೆರವುಗೊಳಿಸಿ ವೈದ್ಯಕೀಯ ಶಿಕ್ಷಣ ಸಂಸ್ಥೆಗೆ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br><br>ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ ಸೇರಿದ (ಹಿಂದಿನ ಜಿಲ್ಲಾ ಆಸ್ಪತ್ರೆಗೆ ಮಂಜೂರಾದ) ಜಾಗವನ್ನು ಸ್ಲಂ ನಿವಾಸಿಗಳು ಅತಿಕ್ರಮಣ ಮಾಡಿದ್ದು, ಸದರಿ ನಿವಾಸಿಗಳಿಗೆ ಪರ್ಯಾಯ ವ್ಯವಸ್ಥೆ ಮಾಡಿ, ಅತಿಕ್ರಮಣಗೊಂಡಿರುವ ಜಾಗವನ್ನು ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ ಹಸ್ತಾಂತರಿಸಬೇಕೆಂದು ಕೋರಿ ಶ್ರೀ ಜಿ.ಟಿ. ರವೀಂದ್ರಕುಮಾರ್ ಮತ್ತು ಇತರರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿದ್ದ ರಿಟ್ ಪಿಟಿಷನ್ ಸಂಖ್ಯೆ: 14537/2010(GM-SLUM)PIL ಪ್ರಕರಣದಲ್ಲಿ ಮಾನ್ಯ ಉಚ್ಚನ್ಯಾಯಾಲಯವು ದಿನಾಂಕ:07.09.2015ರಂದು ತೀರ್ಪು ನೀಡಿದ್ದು, ಸ್ಲಂ ಭೂಮಿಯನ್ನು ತೆರವುಗೊಳಿಸಿ ಸ್ಲಂ ವಾಸಿಗಳಿಗೆ ಪರ್ಯಾಯ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟು 01 ವರ್ಷದೊಳಗಾಗಿ ಅತಿಕ್ರಮಣಗೊಂಡಿರುವ ಜಾಗವನ್ನು ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ ಹಸ್ತಾಂತರಿಸಲು ಕ್ರಮ ಕೈಗೊಳ್ಳುವಂತೆ ಆದೇಶಿಸಿರುತ್ತದೆ.<br><br>ಇದೇ ವಿಷಯಕ್ಕೆ ಸಂಬಂಧಿಸಿದಂತೆ ಈ ಹಿಂದೆ ದಿನಾಂಕ:19.08.2015ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವೈದ್ಯಕೀಯ ಶಿಕ್ಷಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸ್ಲಂ ನಿವಾಸಿಗಳ ಪುನರ್ವಸತಿಗಾಗಿ 05-25 ಎಕರೆ ಹಾಗೂ 02-33 ಎಕರೆ ಪ್ರದೇಶಕ್ಕೆ ಪರಿಹಾರವಾಗಿ 07 ರಿಂದ 08 ಎಕರೆ ಜಮೀನನ್ನು ಜಿಲ್ಲಾಡಳಿತವು ಗುರುತಿಸಿ ಕೊಳಚೆ ನಿರ್ಮೂಲನ ಮಂಡಳಿಗೆ ತುರ್ತಾಗಿ ಹಸ್ತಾಂತರಿಸಲು ಕ್ರಮ ಕೈಗೊಳ್ಳುವಂತೆ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯರವರಿಗೆ ಸೂಚಿಸಲಾಗಿರುತ್ತದೆ. |
| (ಆ) | ಬಂದಿದ್ದಲ್ಲಿ, ಈ ಕುರಿತು ಸರ್ಕಾರದ ಮುಂದಿನ ಕ್ರಮವೇನು; | |

| | | |
|---|---|---|
| | | ಮುಂದುವರೆದು, ಈ ಪ್ರಕರಣದಲ್ಲಿ ಮಾನ್ಯ ನ್ಯಾಯಾಲಯವು ಕಾಲಮಿತಿಯನ್ನು ನಿಗದಿಪಡಿಸಿರುವುದರಿಂದ ಅತಿಕ್ರಮಣಗೊಂಡಿರುವ ಜಾಗವನ್ನು ತೆರವುಗೊಳಿಸಿ ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ ಹಸ್ತಾಂತರಿಸಲು ಕಾನೂನು ರೀತ್ಯಾ ತುರ್ತು ಕ್ರಮವಹಿಸುವಂತೆ ಹಾಗೂ ಕೈಗೊಂಡ ಕ್ರಮದ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಮತ್ತು ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಹಾಗೂ ಕಾರ್ಯನಿರ್ವಾಹಕ ಅಭಿಯಂತರರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರಿಗೆ ಸರ್ಕಾರದಿಂದ ಹಲವಾರು ಪತ್ರ ಹಾಗೂ ಅರೆ ಸರ್ಕಾರಿ ಪತ್ರಗಳ ಮೂಲಕ ಸೂಚಿಸಲಾಗಿರುತ್ತದೆ.<br><br>ರಿಟ್ ಪಿಟಿಷನ್ ಸಂಖ್ಯೆ:14537/2010ರ ಪ್ರಕರಣದಲ್ಲಿ ಮಾನ್ಯ ಉಚ್ಛ ನ್ಯಾಯಾಲಯವು ದಿನಾಂಕ:07.09.2015ರಂದು ನೀಡಿರುವ ಆದೇಶವನ್ನು ಕಾಲಮಿತಿಯಲ್ಲಿ ಜಾರಿ ಮಾಡದೇ ಇರುವುದರ ವಿರುದ್ಧ ಶ್ರೀ ಜಿ.ಟಿ. ರವೀಂದ್ರಕುಮಾರ್ ಮತ್ತು ಇತರರು ಮಾನ್ಯ ಉಚ್ಛ ನ್ಯಾಯಾಲಯದಲ್ಲಿ ನ್ಯಾಯಾಂಗ ನಿಂದನೆ ಪ್ರಕರಣ ಸಂಖ್ಯೆ: 1343/2018(ಸಿವಿಲ್) ನ್ನು ಸಹ ದಾಖಲಿಸಿರುತ್ತಾರೆ.<br><br>ಈಗಾಗಲೇ ಸ್ಲಂ ನಿವಾಸಿಗಳಿಗೆ ವಸತಿ ಸೌಕರ್ಯ ಕಲ್ಪಿಸಲು 06(ಆರು) ಎಕರೆ ಜಾಗದಲ್ಲಿ ಮನೆಗಳ ನಿರ್ಮಾಣ ಕಾಮಗಾರಿಯು ಶೇ. 80 ರಷ್ಟು ಮುಕ್ತಾಯಗೊಂಡಿದ್ದು, ಪೂರ್ಣ ಪ್ರಮಾಣದ ಮನೆಗಳನ್ನು 06 ತಿಂಗಳಲ್ಲಿ ನಿರ್ಮಿಸಿ ನಂತರ ಸ್ಲಂ ನಿವಾಸಿಗಳನ್ನು ತೆರವುಗೊಳಿಸಿ ಅತಿಕ್ರಮಣಕ್ಕೆ ಒಳಗಾಗಿರುವ ಸ್ಲಂ ಪ್ರದೇಶವನ್ನು ಮಿಮ್ಸ್, ಮಂಡ್ಯ ಸಂಸ್ಥೆಗೆ ಹಸ್ತಾಂತರಿಸಲಾಗುವುದೆಂದು ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ, ಮಂಡ್ಯ ಇವರು ತಿಳಿಸಿದ್ದು, ಈ ಸಂಬಂಧ ದಿನಾಂಕ:12.02.2021ರಂದು ಸಭೆ ನಡೆಸಿರುವುದಾಗಿ ತಿಳಿಸಿರುತ್ತಾರೆ. ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ಮಾನ್ಯ ಉಚ್ಛ ನ್ಯಾಯಾಲಯದ ಮುಂದೆ ರಿಟ್ ಅರ್ಜಿ ಸಂಖ್ಯೆ:14537/2010ರ ಪ್ರಕರಣದಲ್ಲಿ ಮಧ್ಯಂತರ ಅರ್ಜಿಯನ್ನು ಸಲ್ಲಿಸಿ ಸ್ಲಂ ನಿವಾಸಿಗಳ ಪುನರ್ವಸತಿಗಾಗಿ ಬೇರೆಡೆ ನಿರ್ಮಿಸಲಾಗುತ್ತಿರುವ ವಸತಿಗಳು ಇನ್ನೂ ಪೂರ್ಣಗೊಂಡಿಲ್ಲದ ಕಾರಣದಿಂದ ಹಾಗೂ ಮೂಲಭೂತ ಸೌಕರ್ಯವನ್ನು ಕಲ್ಪಿಸಲು ಅಗತ್ಯವಿರುವ ಅನುದಾನವು ಬಿಡುಗಡೆಗೊಂಡಿಲ್ಲದ ಕಾರಣ, ಸದರಿ ಅನುದಾನವು ಬಿಡುಗಡೆಗೊಂಡ ನಂತರ 18 ತಿಂಗಳುಗಳಲ್ಲಿ ವಸತಿಗೃಹಗಳನ್ನು ನಿರ್ಮಾಣ ಮಾಡುವುದಾಗಿ ತಿಳಿಸಿರುತ್ತಾರೆ. |

| (ಇ) | ಸದರಿ ಸ್ಥಳವನ್ನು ಯಾವಾಗ ತೆರವುಗೊಳಿಸಲಾಗುವುದು? | ಸದರಿ ಸ್ಥಳದಲ್ಲಿ ಪ್ರಸ್ತುತ ವಾಸಿಸುತ್ತಿರುವ ಸ್ಲಂ ನಿವಾಸಿಗಳಿಗೆ ಜಿಲ್ಲಾಡಳಿತ ಮತ್ತು ಕೊಳಚೆ ನಿರ್ಮೂಲನ ಮಂಡಳಿಯ ಸಹಭಾಗಿತ್ವದಲ್ಲಿ ವಾಸಿಸಲು ಮನೆಗಳನ್ನು ನಿರ್ಮಿಸಿ ಪರ್ಯಾಯ ವ್ಯವಸ್ಥೆ ಮಾಡಿದ ನಂತರ ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ ಸೇರಿದ ಸ್ಥಳವನ್ನು ತೆರವುಗೊಳಿಸಲಾಗುವುದು. |
|---|---|---|

**ಸಂಖ್ಯೆ:** ಎಂಇಡಿ 206 ಎಂಪಿಎಸ್ 2021

**(ಡಾ: ಕೆ. ಸುಧಾಕರ್)**
ವೈದ್ಯಕೀಯ ಶಿಕ್ಷಣ ಸಚಿವರು



ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು – 560001.
ದೂ. 080–22034625 ಫ್ಯಾಕ್ಸ್: 080–22353932

ಸಂಖ್ಯೆ: ಸಿಐ 140 ಎಸ್‌ಪಿಐ 2021 ದಿನಾಂಕ 23.03.2021

**ಇವರಿಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ,
ಬೆಂಗಳೂರು–01.

**ಇವರಿಗೆ,**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ಅಂಚೆ ಪೆಟ್ಟಿಗೆ ಸಂಖ್ಯೆ: 5074,
ವಿಧಾನಸೌಧ, ಬೆಂಗಳೂರು–01.

216 U/S
25/3/21

**ಮಾನ್ಯರೇ,**

**ವಿಷಯ:** ಕರ್ನಾಟಕ ವಿಧಾನಸಭಾ ಸದಸ್ಯರಾದ ಶ್ರೀ ವೆಂಕಟರಮಣಯ್ಯ ಟಿ. (ದೊಡ್ಡಬಳ್ಳಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3850ಕ್ಕೆ ಉತ್ತರಿಸುವ ಬಗ್ಗೆ.

**ಉಲ್ಲೇಖ:** ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಮುಉ/ಪ್ರ.ಸಂ.3850/2021, ದಿನಾಂಕ 16.03.2021.

*****

ದಿನಾಂಕ 26.03.2021 ರಂದು ಉತ್ತರಿಸಬೇಕಾದ ಮೇಲ್ಕಾಣಿಸಿದ ವಿಧಾನಸಭೆಯ ಪ್ರಶ್ನೆಗೆ ಉತ್ತರಗಳ 25 ಪ್ರತಿಗಳನ್ನು ಈ ಮೂಲಕ ಕಳುಹಿಸಿಕೊಡಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

G. Nagaratnamma.
(ನಾಗರತ್ನಮ್ಮ .ಜಿ) 23/3/2021
ಪೀಠಾಧಿಕಾರಿ (ತಾಂತ್ರಿಕ ಕೋಶ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3850

ಸದಸ್ಯರ ಹೆಸರು : ಶ್ರೀ ವೆಂಕಟರಮಣಯ್ಯ ಟಿ. (ದೊಡ್ಡಬಳ್ಳಾಪುರ)

ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

ಉತ್ತರಿಸುವ ದಿನಾಂಕ : 25.03.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಡಾ: ಸರೋಜಿನಿ ಮಹಿಷಿ ವರದಿ ಪ್ರಕಾರ ರಾಜ್ಯದ ಕಾರ್ಖಾನೆಗಳಲ್ಲಿ ಕನ್ನಡಿಗರಿಗೆ ಶೇ.75% ರಷ್ಟು ಉದ್ಯೋಗವನ್ನು ಕಲ್ಪಿಸಲಾಗಿದೆಯೇ; | ಡಾ: ಸರೋಜಿನಿ ಮಹಿಷಿ ವರದಿಯ ಪ್ರಕಾರ ರಾಜ್ಯದಲ್ಲಿ ಚಾಲ್ತಿಯಲ್ಲಿರುವ 50 ಕ್ಕಿಂತ ಹೆಚ್ಚು ಕಾರ್ಮಿಕರುಳ್ಳ ಬೃಹತ್, ಮಧ್ಯಮ ಮತ್ತು ಸಣ್ಣ ಕೈಗಾರಿಕಾ ಘಟಕಗಳಲ್ಲಿ ಎ ಮತ್ತು ಬಿ ವರ್ಗಗಳಲ್ಲಿ ಕ್ರಮವಾಗಿ ಶೇಕಡ 65 ಮತ್ತು ಶೇಕಡ 80 ಹಾಗೂ ಸಿ ಮತ್ತು ಡಿ ವರ್ಗಗಳಲ್ಲಿ ಶೇಕಡ 100 ರಷ್ಟು ಉದ್ಯೋಗಗಳನ್ನು ಕನ್ನಡಿಗರಿಗೆ/ಸ್ಥಳೀಯರಿಗೆ ಒದಗಿಸಬೇಕಾಗಿರುತ್ತದೆ.<br><br>ಡಿಸೆಂಬರ್ 2020ರ ಅಂತ್ಯಕ್ಕೆ ಡಾ: ಸರೋಜಿನಿ ಮಹಿಷಿ ವರದಿಯನ್ವಯ ಇಲಾಖೆಯ ವ್ಯಾಪ್ತಿಯಲ್ಲಿ ಕ್ರೂಢೀಕರಿಸಿರುವ ಮಾಹಿತಿಯಂತೆ ರಾಜ್ಯದಲ್ಲಿನ 50 ಕ್ಕಿಂತ ಹೆಚ್ಚು ಕಾರ್ಮಿಕರುಳ್ಳ ಒಟ್ಟು 1413 ಖಾಸಗಿ ಉತ್ಪಾದನಾ ಕೈಗಾರಿಕಾ ಘಟಕಗಳಲ್ಲಿ ಒಟ್ಟಾರೆ ಶೇಕಡ 94 ರಷ್ಟು ಉದ್ಯೋಗಗಳನ್ನು ಕನ್ನಡಿಗರಿಗೆ/ಸ್ಥಳೀಯರಿಗೆ ನೀಡಲಾಗಿದೆ. |
| ಆ | ಹಾಗಿದ್ದಲ್ಲಿ, ಯಾವ ಯಾವ ಜಿಲ್ಲೆಗಳಲ್ಲಿ ಎಷ್ಟು ಕನ್ನಡಿಗರಿಗೆ ಉದ್ಯೋಗಗಳನ್ನು ಕಲ್ಪಿಸಲಾಗಿದೆ? (ವಿವರ ನೀಡುವುದು) | ಡಿಸೆಂಬರ್ 2020ರ ಅಂತ್ಯಕ್ಕೆ ಡಾ: ಸರೋಜಿನಿ ಮಹಿಷಿ ವರದಿಯಂತೆ 50 ಕ್ಕಿಂತ ಹೆಚ್ಚು ಕಾರ್ಮಿಕರುಳ್ಳ ಕೈಗಾರಿಕಾ ಘಟಕಗಳಲ್ಲಿ ಕನ್ನಡಿಗರಿಗೆ/ಸ್ಥಳೀಯರಿಗೆ ಉದ್ಯೋಗ ಒದಗಿಸಿರುವ ಬಗ್ಗೆ ಜಿಲ್ಲಾವಾರು ಮಾಹಿತಿಯನ್ನು ಅನುಬಂಧದಲ್ಲಿ ಒದಗಿಸಿದೆ. |

ಸಿಐ 140 ಎಸ್‌ಪಿಐ 2021

(ಜಗದೀಶ್ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು

| ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ವೆಂಕಟರಮಣಯ್ಯ ಟಿ. (ದೊಡ್ಡಬಳ್ಳಾಪುರ) ರವರ ಪ್ರಶ್ನೆ ಸಂಖ್ಯೆ 3850ರ ಉತ್ತರಕ್ಕೆ ಅನುಬಂಧ | | | | | | |
|---|---|---|---|---|---|---|
| ಡಿಸೆಂಬರ್ 2020ರ ಅಂತ್ಯಕ್ಕೆ ಡಾ: ಸರೋಜಿನಿ ಮಹಿಷಿ ವರದಿಯಂತೆ 50 ಕ್ಕಿಂತ ಹೆಚ್ಚು ಕಾರ್ಮಿಕರುಳ್ಳ ಕೈಗಾರಿಕಾ ಘಟಕಗಳಲ್ಲಿ ಕನ್ನಡಿಗರಿಗೆ/ಸ್ಥಳೀಯರಿಗೆ ಉದ್ಯೋಗ ಒದಗಿಸಿರುವ ಬಗ್ಗೆ ಜಿಲ್ಲಾವಾರು ಮಾಹಿತಿ | | | | | | |
| ಕ್ರಮ ಸಂಖ್ಯೆ | ಜಿಲ್ಲೆ | ಘಟಕಗಳ ಸಂಖ್ಯೆ | ಕನ್ನಡಿಗ ಉದ್ಯೋಗಿಗಳ ಸಂಖ್ಯೆ | ಇತರೆ ಉದ್ಯೋಗಿಗಳ ಸಂಖ್ಯೆ | ಒಟ್ಟು ಉದ್ಯೋಗಿಗಳ ಸಂಖ್ಯೆ | ಶೇಕಡವಾರು ಕನ್ನಡಿಗ/ಸ್ಥಳೀಯ ಉದ್ಯೋಗಿಗಳು |
| 1 | ಬೆಂಗಳೂರು (ನ) | 670 | 185865 | 10864 | 196729 | 94% |
| 2 | ಬೆಂಗಳೂರು (ಗ್ರಾ) | 124 | 43225 | 3407 | 46632 | 93% |
| 3 | ಬೆಳಗಾಂ | 70 | 22849 | 1095 | 23944 | 95% |
| 4 | ಬೀದರ್ | 19 | 2871 | 266 | 3137 | 92% |
| 5 | ಬಿಜಾಪುರ | 11 | 3102 | 177 | 3279 | 95% |
| 6 | ಬಾಗಲಕೋಟೆ | 23 | 9241 | 147 | 9388 | 98% |
| 7 | ಬಳ್ಳಾರಿ | 26 | 11507 | 1203 | 12710 | 91% |
| 8 | ಚಿತ್ರದುರ್ಗ | 10 | 4014 | 59 | 4073 | 99% |
| 9 | ಚಾಮರಾಜನಗರ | 2 | 1183 | 47 | 1230 | 96% |
| 10 | ಚಿಕ್ಕಮಗಳೂರು | 11 | 2025 | 68 | 2093 | 97% |
| 11 | ಚಿಕ್ಕಬಳ್ಳಾಪುರು | 13 | 3033 | 351 | 3384 | 90% |
| 12 | ಧಾರವಾಡ | 42 | 8427 | 355 | 8782 | 96% |
| 13 | ದಕ್ಷಿಣ ಕನ್ನಡ | 30 | 8732 | 797 | 9529 | 92% |
| 14 | ದಾವಣಗೆರೆ | 13 | 3199 | 23 | 3222 | 99% |
| 15 | ಗದಗ | 6 | 945 | 10 | 955 | 99% |
| 16 | ಹಾಸನ | 11 | 6073 | 72 | 6145 | 99% |
| 17 | ಹಾವೇರಿ | 7 | 3218 | 112 | 3330 | 97% |
| 18 | ಕಲಬುರ್ಗಿ | 12 | 9471 | 885 | 10356 | 91% |
| 19 | ಕೋಲಾರ | 41 | 22528 | 3266 | 25794 | 87% |
| 20 | ಕೊಡಗು | 5 | 530 | 20 | 550 | 96% |
| 21 | ಕೊಪ್ಪಳ | 15 | 3454 | 337 | 3791 | 91% |
| 22 | ಮಂಡ್ಯ | 17 | 7624 | 122 | 7746 | 98% |
| 23 | ಮೈಸೂರು | 47 | 17356 | 912 | 18268 | 95% |
| 24 | ರಾಯಚೂರು | 14 | 6419 | 262 | 6681 | 96% |
| 25 | ರಾಮನಗರ | 51 | 22727 | 987 | 23714 | 96% |
| 26 | ಶಿವಮೊಗ್ಗ | 13 | 12874 | 164 | 13038 | 99% |
| 27 | ತುಮಕೂರು | 37 | 6483 | 225 | 6708 | 97% |
| 28 | ಉಡುಪಿ | 47 | 10141 | 537 | 10678 | 95% |
| 29 | ಉತ್ತರ ಕನ್ನಡ | 25 | 5298 | 175 | 5473 | 97% |
| 30 | ಯಾದಗಿರಿ | 1 | 236 | 12 | 248 | 95% |
| | ಒಟ್ಟು | 1413 | 444650 | 26957 | 471607 | 94% |



ಕರ್ನಾಟಕ ಸರ್ಕಾರ

ಸಂಖ್ಯೆ: ಕಾಇ 35 ಎಲ್‌ಡಬ್ಲ್ಯೂಎ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 23-03-2021

ಇವರಿಂದ,
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ.
ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಖಾದರ್ ಯು.ಟಿ. (ಮಂಗಳೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3819ಕ್ಕೆ ಉತ್ತರಿಸುವ ಕುರಿತು.

ಉಲ್ಲೇಖ: ತಮ್ಮ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/9ಮುಉ/ಪ್ರ. ಸಂ. 3819/2021, ದಿನಾಂಕ: 17-03-2021.

*********

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಖಾದರ್ ಯು.ಟಿ. (ಮಂಗಳೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3819ಕ್ಕೆ ಉತ್ತರವನ್ನು ತಯಾರಿಸಿದ್ದು, ಉತ್ತರದ 25 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ, ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ

A. Umadevi 23/3/2021
(ಎ. ಉಮಾದೇವಿ)
ಪೀಠಾಧಿಕಾರಿ-2,
ಕಾರ್ಮಿಕ ಇಲಾಖೆ.

ಕರ್ನಾಟಕ ವಿಧಾನಸಭೆ

| 1. | ಮಾನ್ಯ ಸದಸ್ಯರ ಹೆಸರು | ಶ್ರೀ ಖಾದರ್ ಯು.ಟಿ. (ಮಂಗಳೂರು) |
|---|---|---|
| 2 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 3819 |
| 3 | ಉತ್ತರಿಸುವ ದಿನಾಂಕ | 25.03.2021 |
| 4 | ಉತ್ತರಿಸುವ ಸಚಿವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೆಲವು ಸರ್ಕಾರಿ ಕಛೇರಿಗಳಲ್ಲಿ, ಹೊರಗುತ್ತಿಗೆ ಸಿಬ್ಬಂದಿಗಳಿಗೆ ಆಯಾ ಏಜೆನ್ಸಿಗಳು ಕಾರ್ಮಿಕ ಇಲಾಖೆ ನಿಗದಿಪಡಿಸಿದ ಕನಿಷ್ಠ ವೇತನಕ್ಕಿಂತ ಕಡಿಮೆ ವೇತನ ಪಾವತಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಹಾಗಿದ್ದಲ್ಲಿ, ಈ ಕುರಿತು ಕೈಗೊಂಡ ಕ್ರಮಗಳೇನು? | ಸರ್ಕಾರಿ ಕಛೇರಿಗಳಲ್ಲಿ, ಹೊರಗುತ್ತಿಗೆ ಸಿಬ್ಬಂದಿಗಳಿಗೆ ಮಾನವ ಸಂಪನ್ಮೂಲ ಏಜೆನ್ಸಿಗಳು ಕನಿಷ್ಠ ವೇತನಕ್ಕಿಂತ ಕಡಿಮೆ ವೇತನ ಪಾವತಿಸುತ್ತಿರುವ ಬಗ್ಗೆ ರಾಜ್ಯಾದ್ಯಂತ ಒಟ್ಟು 6223 ತಪಾಸಣೆಗಳನ್ನು ನಡೆಸಿದ್ದು, 20,116 ಕಾರ್ಮಿಕರಿಗೆ ಸಂಬಂಧಿಸಿದಂತೆ ರೂ. 50,82,02,743-00 ಗಳ 2365 ಕ್ಲೈಮ್ ಅರ್ಜಿಗಳನ್ನು ದಾಖಲಿಸಲಾಗಿರುತ್ತದೆ. ಸದರಿ ಕ್ಲೈಮ್ ಅರ್ಜಿಗಳಲ್ಲಿ 365 ಅರ್ಜಿಗಳನ್ನು ವಿಲೇವಾರಿ ಮಾಡಲಾಗಿದ್ದು, 2006 ಕಾರ್ಮಿಕರಿಗೆ ರೂ. 5,55,86,935-00ಗಳ ಮೊತ್ತವನ್ನು ಪಾವತಿಸುವಂತೆ ಸಕ್ಷಮ ಪ್ರಾಧಿಕಾರಿಗಳಿಂದ ಆದೇಶವಾಗಿರುತ್ತದೆ. |

ಕಾಇ 35 ಎಲ್‌ಡಬ್ಲ್ಯೂಎ 2021

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು.

# ಕರ್ನಾಟಕ ಸರ್ಕಾರ

ಸಂಖ್ಯೆ :DPAR 86 RASA 2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಧಾನ ಸೌಧ,
ಬೆಂಗಳೂರು, ದಿನಾಂಕ:24.03.2021

ಇವರಿಂದ,

ಸರ್ಕಾರದ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
ವಿಧಾನ ಸೌಧ, ಬೆಂಗಳೂರು

ಇವರಿಗೆ,

ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನ ಸೌಧ, ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:3642 ಕ್ಕೆ ಉತ್ತರ ನೀಡುವ ಕುರಿತು.

<<<<<>>>>>

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಹ್ಯಾರಿಸ್ ಎನ್.ಎ. (ಶಾಂತಿನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:3642 ಸಂಬಂಧಪಟ್ಟಂತೆ ಉತ್ತರವನ್ನು ತಯಾರಿಸಿ, ಸದರಿ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿದೆ.

ತಮ್ಮ ನಂಬುಗೆಯ,

(ಎಂ.ಎಂ. ರಾಜು) 24/3/21
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ರಾಜಕೀಯ)

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3642
2. ವಿಧಾನ ಸಭೆಯ ಸದಸ್ಯರು : ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ)
3. ಉತ್ತರಿಸಬೇಕಾದ ದಿನಾಂಕ : 25.03.2021
4. ಉತ್ತರಿಸುವವರು : ಮಾನ್ಯ ಮುಖ್ಯ ಮಂತ್ರಿಗಳು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕನ್ನಡಿಗರ ಆರಾಧ್ಯದೈವ ಕಲಾರತ್ನ ಹಾಗೂ ಚಲನಚಿತ್ರರಂಗದ ಮೇರು ನಟರಾಗಿ ಖ್ಯಾತನಾಮರಾದ ದಿ: ಡಾ: ರಾಜ್ ಕುಮಾರರವರಿಗೆ ಭಾರತರತ್ನ ಪ್ರಶಸ್ತಿಯನ್ನು ನೀಡಿ ಗೌರವಿಸುವಲ್ಲಿ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡುವ ಬಗ್ಗೆ ಸರ್ಕಾರದ ಮುಂದಿರುವ ನಿಲುವುಗಳೇನು: | ಭಾರತರತ್ನ ಪ್ರಶಸ್ತಿಗೆ ನಾಮನಿರ್ದೇಶನ ಮಾಡುವ ಕುರಿತಂತೆ ಕೇಂದ್ರ ಸರ್ಕಾರದ ಮಾರ್ಗಸೂಚಿಯಲ್ಲಿ "The recommendation for Bharath Rathna are made by the Prime Minister himself to the President. No formal recommendations for this are necessary" ಎಂದು ತಿಳಿಸಲಾಗಿದೆ. |
| ಆ) | ಆ) ಕಳೆದ ಮೂರು ವರ್ಷಗಳಲ್ಲಿ ರಾಜ್ಯದಿಂದ ಭಾರತರತ್ನ ಪ್ರಶಸ್ತಿ ನೀಡುವಂತೆ ಶಿಫಾರಸ್ಸು ಕೇಂದ್ರಕ್ಕೆ ಸಲ್ಲಿಸಿರುವ ಕುರಿತು ವಿವರಗಳೇನು; | ಆದಾಗ್ಯೂ, ದಿನಾಂಕ 24-01-2018 ಹಾಗೂ 03-06-2019ರ ರಾಜ್ಯ ಸರ್ಕಾರದ ಪತ್ರಗಳಲ್ಲಿ ಶ್ರೀ ಸಿದ್ದಗಂಗಾ ಮಠದ ಶ್ರೀ ಶ್ರೀ ಶ್ರೀ ಶಿವಕುಮಾರಸ್ವಾಮೀಜಿ ರವರು, ಸುಧೀರ್ಘವಾಗಿ ಸಲ್ಲಿಸಿರುವ ಸಮಾಜ ಸೇವಾ ಕಾರ್ಯಗಳನ್ನು ಗುರುತಿಸಿ ವಿವಿಧ ಸಂಘ ಸಂಸ್ಥೆಗಳು, ಗಣ್ಯ ವ್ಯಕ್ತಿಗಳು ಸಲ್ಲಿಸಿದ್ದ ಮನವಿಗಳನ್ನು ಕೇಂದ್ರ ಸರ್ಕಾರಕ್ಕೆ ಕಳುಹಿಸಲಾಗಿದೆ. |
| ಇ) | ಭಾರತರತ್ನ ಪ್ರಶಸ್ತಿಗೆ ಎಲ್ಲಾ ಅರ್ಹತೆಗಳನ್ನು, ಮಾನದಂಡಗಳನ್ನು ಮೇರು ವ್ಯಕ್ತಿತ್ವವನ್ನು ಹೊಂದಿ ಅಜರಾಮರರಾಗಿರುವ ದಿ: ಡಾ: ರಾಜ್ ಕುಮಾರ್ ರವರಿಗೆ ಭಾರತರತ್ನ ಪ್ರಶಸ್ತಿಯನ್ನು ನೀಡುವಂತೆ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಸರ್ಕಾರವು ಯಾವ ಕ್ರಮ ವಹಿಸಲಿದೆ? | ಮೇಲೆ (ಅ) ರಲ್ಲಿ ತಿಳಿಸಲಾದಂತೆ ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಉದ್ಭವಿಸುವುದಿಲ್ಲ. |

ಕಡತ ಸಂಖ್ಯೆ: ಸಿಆಸುಇ 86 ರಾಸ 2021

[ಬಿ.ಎಸ್. ಯಡಿಯೂರಪ್ಪ]
ಮಾನ್ಯ ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

ಸಂಖ್ಯೆ: ಸಿಐ 118 ಸಿಓಎಫ್ 2021

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 24.03.2021

182
25/03/2021

ಇವರಿಂದ:

ಸರ್ಕಾರದ ಅಪರ ಮುಖ್ಯಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:

ಕಾರ್ಯದರ್ಶಿ(ಪ್ರ)
ಕರ್ನಾಟಕ ವಿಧಾನ ಸಭೆ
ವಿಧಾನಸೌಧ, ಬೆಂಗಳೂರು.

ಮಾನ್ಯರೆ,

ವಿಷಯ: ಮಾನ್ಯ ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಸೋಮಲಿಂಗಪ್ಪ ಎಂ.ಎಸ್. ಇವರ ಚುಕ್ಕೆ ಗುರುತಿಲ್ಲದ ಪ್ರ.ಸಂ: 3652ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ತಮ್ಮ ಕಛೇರಿ ಪತ್ರ ಸಂಖ್ಯೆ: ವಿಸಪ್ರಶಾ/15ನೇವಿಸ/9ಮುಉ/ಚುಗು-ಚುರ.ಪ್ರಶ್ನೆ/18/2021 ದಿನಾಂಕ:19.03.2021.

*******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖಿತ ಪತ್ರಗಳ ಕಡೆಗೆ ತಮ್ಮ ಗಮನವನ್ನು ಸೆಳೆಯಲಾಗಿದೆ. ಕಾರ್ಯದರ್ಶಿ ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಸೋಮಲಿಂಗಪ್ಪ ಎಂ.ಎಸ್. ಇವರ ಚುಕ್ಕೆ ಗುರುತಿಲ್ಲದ ಪ್ರ.ಸಂ: 3652ಕ್ಕೆ ಸಂಬಂಧಿಸಿದಂತೆ ಉತ್ತರದ 25 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿದೆ. ಸದರಿ ಉತ್ತರದ ಸಾಫ್ಟ್ ಪ್ರತಿಗಳನ್ನು ಪಿಡಿಎಫ್ ಮಾದರಿಯಲ್ಲಿ ಇ-ಮೇಲ್ ವಿಳಾಸ **dsqb-kla-kar@nic.inಕ್ಕೆ** ಮುಂದಿನ ಅಗತ್ಯ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ
24/3/21
(ಜೆ.ಶೀಲಾಬಾಯಿ)
ಸರ್ಕಾರದ ಅಧೀನ ಕಾರ್ಯದರ್ಶಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ
ದೂರವಾಣಿ : 080-22034611

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3652
2. ಮಾನ್ಯ ಸದಸ್ಯರ ಹೆಸರು : ಶ್ರೀ ಸೋಮಲಿಂಗಪ್ಪ ಎಂ.ಎಸ್.
3. ಉತ್ತರಿಸಬೇಕಾದ ದಿನಾಂಕ : 25.03.2021.
4. ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಬಳ್ಳಾರಿ ಜಿಲ್ಲೆ, ಸಿರಗುಪ್ಪ ತಾಲ್ಲೂಕಿನಲ್ಲಿ ಸಕ್ಕರೆ ಕಾರ್ಖಾನೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಳ್ಳಾರಿ ಜಿಲ್ಲೆ, ಸಿರಗುಪ್ಪ ತಾಲ್ಲೂಕಿನ ದೇಶನೂರು ಗ್ರಾಮದಲ್ಲಿ ಮೆ\|\| ಎನ್‌ಎಸ್‌ಎಲ್ (ತುಂಗಭದ್ರ) ಶುಗರ್ಸ್ ಲಿ. ಎಂಬ ಸಕ್ಕರೆ ಕಾರ್ಖಾನೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| (ಆ) | ಹಾಗಿದ್ದಲ್ಲಿ, ಸದರಿ ಸಕ್ಕರೆ ಕಾರ್ಖಾನೆಯನ್ನು ಯಾವಾಗ ಪ್ರಾರಂಭಿಸಲಾಯಿತು; | ಸದರಿ ಕಾರ್ಖಾನೆಯನ್ನು1973ರಲ್ಲಿ 1500 ಟಿಸಿಡಿ ಸಾಮರ್ಥ್ಯದೊಂದಿಗೆ ಮೆ\|\| ಕೊಥಾರಿ ಶುಗರ್ಸ್ ಅಂಡ್ ಕೆಮಿಕಲ್ಸ್ ಲಿ., ಚೆನ್ನೈ ಇವರು ಸ್ಥಾಪನೆ ಮಾಡಿರುತ್ತಾರೆ. ನಂತರ ಕಾರ್ಖಾನೆಯನ್ನು 1983ರಲ್ಲಿ ಮೆ\|\| ಪೊದ್ದಾರ್ ಮ್ಯಾನೇಜ್‌ಮೆಂಟ್, ಕೋಲ್ಕತ್ತ ಇವರಿಗೆ 1983ರಲ್ಲಿ ಮಾರಾಟ ಮಾಡಲಾಗಿತ್ತು. ತರುವಾಯ 1993 ರಲ್ಲಿ ಮೆ\|\| ವಿನ್‌ಸಮ್ ಇಂಟರ್ ನ್ಯಾಷನಲ್ ಲಿ., ಕೋಲ್ಕತ್ತ ಇವರಿಗೆ ಆಡಳಿತ ನಿರ್ವಹಣೆಗೆ ವಹಿಸಿಕೊಡಲಾಗಿದೆ. ಅಂತಿಮವಾಗಿ, ಮೆ\|\| ಎನ್‌ಎಸ್‌ಎಲ್ ಶುಗರ್ಸ್‌ರವರು 2006ರಲ್ಲಿ ಮೆ\|\| ವಿನ್‌ಸಮ್ ಇಂಟರ್ ನ್ಯಾಷನಲ್ ಲಿ., ಕೋಲ್ಕತ್ತರವರಿಂದ ಈ ಕಾರ್ಖಾನೆಯನ್ನು ಖರೀದಿಸಿದ್ದು, ಈ ಕಾರ್ಖಾನೆ ಈಗ ಕಬ್ಬು ಅರೆಯುವ ಕಾರ್ಯ ನಿರ್ವಹಿಸುತ್ತಿದೆ. |
| (ಇ) | ಪ್ರಸ್ತುತ ಆ ಕಾರ್ಖಾನೆಯನ್ನು ಸ್ಥಗಿತಗೊಳಿಸಿರುವ ಕಾರಣವೇನು; (ವಿವರಒದಗಿಸುವುದು) | ಕಾರ್ಖಾನೆಯು 2019-20ನೇ ಹಂಗಾಮಿನಿಂದ ಕಬ್ಬು ಅರೆಯುವ ಕಾರ್ಯವನ್ನು ಸ್ಥಗಿತಗೊಳಿಸಿರುತ್ತದೆ. ಕಾರ್ಖಾನೆ ಸ್ಥಗಿತಗೊಳ್ಳಲು ಪ್ರಮುಖ ಕಾರಣಗಳು ಈ ಕೆಳಕಂಡಂತಿದೆ.<br>1. ಕಾರ್ಖಾನೆಯ ಕಬ್ಬುಅರೆಯುವ ಸಾಮರ್ಥ್ಯಕ್ಕೆ ಅನುಗುಣವಾಗಿ ಕಾರ್ಖಾನೆಯ ಕಾರ್ಯವ್ಯಾಪ್ತಿಯಲ್ಲಿ ಕಬ್ಬಿನ ಲಭ್ಯತೆ ಇಲ್ಲದೆ ಇರುವುದು.<br>2. 2018-19ನೇ ಹಂಗಾಮಿನ ಪೂರ್ವದಲ್ಲಿ ತೀವ್ರತರವಾದ ಬರಗಾಲದಿಂದಾಗಿ ನೀರಿನ ಕೊರತೆಯಿಂದಾಗಿ ಕಬ್ಬಿನ ಬೆಳೆಯಲ್ಲಿ ಕುಂಠಿತವಾಗಿರುವುದು.<br>3. ರೈತರು ಕಬ್ಬು ಬೆಳೆಯಲು 12-15 ತಿಂಗಳುಗಳ ಕಾಲಾವಕಾಶ ಬೇಕಾಗುತ್ತದೆ. ಭತ್ತ ಬೆಳೆಯಲು 6 ತಿಂಗಳುಗಳು ಸಾಕಾಗುತ್ತದೆ. ಆದ್ದರಿಂದ ಹೆಚ್ಚಿನ ರೈತರು ವರ್ಷದಲ್ಲಿಎರಡು ಬೆಳೆ ಬರುವ ಭತ್ತದ ಬೆಳೆಯನ್ನು ಲಾಭದಾಯಕ ಎಂದು ಪರಿಗಣಿಸಿ, ಭತ್ತ ಬೆಳೆಯುವಲ್ಲಿ ಆಸಕ್ತಿ ತೋರುತ್ತಿರುವುದು.<br>4. ಕಾರ್ಖಾನೆಯು ಪ್ರಸ್ತುತ ಆರ್ಥಿಕ ನಷ್ಟದಲ್ಲಿದ್ದು, ಸಾಲಗಳು ಎನ್‌ಪಿಎ ಆಗಿರುವುದರಿಂದ ದುಡಿಯುವ ಬಂಡವಾಳದ ಕೊರತೆಯನ್ನು ಎದುರಿಸುತ್ತಿರುವುದು |
| (ಈ) | ಪ್ರಸ್ತುತ ಸಕ್ಕರೆ ಕಾರ್ಖಾನೆಯನ್ನು ಪ್ರಾರಂಭಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ಪೂರ್ಣ ಮಾಹಿತಿ ಒದಗಿಸುವುದು) | ಇದು ಖಾಸಗಿ ಸಕ್ಕರೆ ಕಾರ್ಖಾನೆಯಾಗಿರುವುದರಿಂದ ಈ ಕಾರ್ಖಾನೆಯ ಆಡಳಿತ ಮಂಡಳಿಯು ಕಾರ್ಖಾನೆಯನ್ನು ಪ್ರಾರಂಭಿಸುವ ಬಗ್ಗೆ ಕ್ರಮ ಕೈಗೊಳ್ಳಬೇಕಾಗಿರುತ್ತದೆ. ಕಾರ್ಖಾನೆಯು ದಿನಾಂಕ 07.11.2020ರಂದು ಸಕ್ಕರೆ ನಿರ್ದೇಶನಾಲಯಕ್ಕೆ ಬರೆದಿರುವ ಪತ್ರದಲ್ಲಿ 2020-21ನೇ ಕಬ್ಬು ಅರೆಯುವ ಹಂಗಾಮನ್ನು ನವೆಂಬರ್ 2021 ರಿಂದ ಪ್ರಾರಂಭಿಸುವ ಯೋಜನೆ ಹೊಂದಿರುವುದಾಗಿ ತಿಳಿಸಿರುತ್ತಾರೆ.<br>ಒಂದು ವೇಳೆ ಕಾರ್ಖಾನೆ ಪ್ರಾರಂಭ ಮಾಡದೇ ಇದ್ದಲ್ಲಿ ಕಾರ್ಖಾನೆಯ ವ್ಯಾಪ್ತಿಯಲ್ಲಿ ಲಭ್ಯವಿರುವ ಕಬ್ಬನ್ನು ನೆರೆಯ ಸಕ್ಕರೆ ಕಾರ್ಖಾನೆಗಳಾದ ಮೈಲಾರ ಶುಗರ್ಸ್, ಬೀರಬ್ಬಿ, ವಿಜಯನಗರ ಶುಗರ್ಸ್, ಗಂಗಾಪುರ ಮತ್ತು ಬಾಲಾಜಿ ಶುಗರ್ಸ್, ಯರಗಲ್ ಈ ಮೂರು ಸಕ್ಕರೆ ಕಾರ್ಖಾನೆಗಳಿಗೆ ಹಂಚಿಕೆ ಮಾಡುವ ಮೂಲಕ ಕಬ್ಬು ಬೆಳೆಗಾರ ರೈತರಿಗೆ ತೊಂದರೆಯಾಗದಂತೆ ಎಲ್ಲಾ ಅಗತ್ಯ ಕ್ರಮಗಳನ್ನು ಕೈಗೊಳ್ಳಲಾಗುವುದು. |

ಸಂಖ್ಯೆ: ಸಿಐ 118 ಸಿಓಎಫ್ 2021

(ಎನ್. ನಾಗರಾಜು.ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು

